ಮಹಾತ್ಮರ ಮನೋರಂಗ
ಅನುವಾದಕರು : ಶ್ರೀ. ರಂ. ರಾ. ದಿವಾಕರ
ಜೀವನದ ವಿವಿಧ ಸಮಸ್ಯೆಗಳ ಬಗ್ಗೆ ಗಾಂಧೀಜಿಯ ವಿಚಾರಗಳನ್ನು ಅವರ ಭಾಷಣ ಲೇಖನಗಳಿಂದಲೇ ಆಯ್ದು, ಸಂಗ್ರಹಿಸಿದ ಪುಸ್ತಕ.
೩೦೪ ಪುಟ, ಬೆಲೆ: ೪-೮-೦
ಅಧ್ಯಾತ್ಮ ಕಾರ್ಯಾಲಯ ಹುಬ್ಬಳ್ಳಿ



ಬೆಲೆ: ಎರಡು ಆಣೆ

# ಕರ್ಮವೀರ

ಸಂಪಾದಕರು : ಹ. ರಾ. ಪುರೋಹಿತ ಎಂ. ಎ.

——ಅಖಿಲ ಕರ್ನಾಟಕದಲ್ಲಿ ಅತ್ಯಂತ ಜನಪ್ರಿಯ ವಾರಪತ್ರಿಕೆ——

Editor : H. R. Purohit. M. A.

—( ಸಂಪುಟ ೧೯ )— ಹುಬ್ಬಳ್ಳಿ ಸೋಮವಾರ ತಾರೀಖು ೧—೯—೧೯೪೭ —( ಸಂಚಿಕೆ ೨೨ )—




# ಪೂರ್ವ ಆಫ್ರಿಕದಲ್ಲಿ ಹಿಂದೀ ಹಿತಸಂರಕ್ಷಣೆ

## ಹಿಂದೀಯರ ಬೆವರು ನೆತ್ತರಗಳಿಂದ ಕಟ್ಟಿದ ತಾಂಗನೀಕ— ಅವರ ವ್ಯಾಪಾರ ವಾಣಿಜ್ಯ ಹಿತಗಳ ಬಗ್ಗೆ ಅಲ್ಲಿಯ ಸರಕಾರದ ವಿರುದ್ಧ ಧೋರಣ— ಬಿಳಿಯರ ಸ್ವಾರ್ಥ, ವರ್ಣದ್ವೇಷ ಮತ್ತು ಪರಸ್ವಾಪಹಾರ ಬುದ್ಧಿ—

ಅರಬ್ಬೀ ಸಮುದ್ರ ಮತ್ತು ಹಿಂದೀಸಾಗರಗಳಲ್ಲಿ ಸ್ವತಂತ್ರ ಭಾರತಕ್ಕೂ ಹಡಗಿನ ಹಾಗೂ ಸೈನ್ಯದ ಠಾಣೆಗಳು ಬೇಕು. ಹಿಂದೀಯರ ಶ್ರಮ ಮತ್ತು ಹಣದಿಂದ ಕಟ್ಟಲಾದ ತಾಂಗನೀಕಕ್ಕಿಂತ ಆಫ್ರಿಕದಲ್ಲಿ ಬೇರಾವ ಸ್ಥಳ ಉತ್ತಮವೆನಿಸೀತು ? ಅದರಿಂದ ಹಿಂದೀ ವಿರುದ್ಧ ಧೋರಣ ಹಿಡಿದಿರುವ ದಕ್ಷಿಣ ಆಫ್ರಿಕ ಹಾಗೂ ಕೆನ್ಯಗಳ ಸ್ವಚ್ಛಂದ ವೃತ್ತಿಗೊಂದು ತಡೆಯನ್ನೊಡ್ಡಿದಂತೆಯೂ ಆಗುತ್ತದೆ. ಸಂಯುಕ್ತ ರಾಷ್ಟ್ರಸಂಘವು ತಾಂಗನೀಕದ ಪಾಲಕತ್ವವನ್ನು ಭಾರತಕ್ಕೆ ಕೊಡಬೇಕು. ಭಾರತವು ತಾಂಗನೀಕದ ಆಫ್ರಿಕನ್ನರನ್ನು ಸ್ವಾತಂತ್ರ್ಯ ಮತ್ತು ನಾಗರಿಕತೆಗಳತ್ತ ಒಯ್ಯುವದು— ಎಂದು ಪೂರ್ವ ಆಫ್ರಿಕದ ಸುಪ್ರಸಿದ್ಧ ಹಿಂದೀಯರಾದ ಶ್ರೀ ಯು. ಕೆ. ಓಜರು ಅಭಿಪ್ರಾಯ ಪಡುತ್ತಾರೆ.

ಮೊದಲನೆಯ ಮಹಾಯುದ್ಧ ಮುಗಿದೊಡನೆ ವರ್ಸಾಯ ಒಪ್ಪಂದದಲ್ಲಿ ಜರ್ಮನಿಯ ವಸಾಹತು ಸಾಮ್ರಾಜ್ಯವನ್ನು ರಾಷ್ಟ್ರಸಂಘದ (League of Nations) ಅಧೀನದಲ್ಲಿಡಬೇಕೆಂಬ ಒಂದು ಸೂಚನೆ ಬಂದಿತ್ತು. ಕೊನೆಯಲ್ಲಿ ಮಿತ್ರಪಕ್ಷಗಳ ರಾಜ್ಯಗಳು ಬ್ರಿಟನ್, ಬೆಲ್ಜಿಯಂ, ದಕ್ಷಿಣ ಆಫ್ರಿಕದ ಒಕ್ಕೂಟ, ಆಸ್ಟ್ರೇಲಿಯ, ನ್ಯೂಜಿಲೆಂಡ್, ಫ್ರಾನ್ಸ್ ಮತ್ತು ಜಪಾನುಗಳ ಅಧೀನದೊಳಗೆ ತರಲ್ಪಟ್ಟವು. ಆ ಪ್ರಶ್ನೆಯು ಚರ್ಚೆಯಲ್ಲಿರುವಾಗ ಹಿಂದೀಸೈನ್ಯದ ಹಾಗೂ ಹಣದ ಸಹಾಯದಿಂದ ಗೆಲ್ಲಲಾದ ಜರ್ಮನ್ ಪೂರ್ವಆಫ್ರಿಕವನ್ನು ಹಿಂದುಸ್ತಾನದ ಅಧೀನಕ್ಕೆ ಒಳಪಡಿಸಬೇಕೆಂಬ ಸಲಹೆಯು ಮುಂದೆಬಿತ್ತು. ಆ ಸಲಹೆಯನ್ನು ಹುಟ್ಟಿದಾಗಲೇ ಕೊಲ್ಲಲಾಯಿತು. ಬ್ರಿಟನ್ ಮತ್ತು ಹಿಂದುಸ್ತಾನಗಳಲ್ಲಿ ಅಧಿಕಾರದಲ್ಲಿದ್ದ ಸರಕಾರಗಳು ಇದನ್ನು ಅನುಮೋದಿಸಲಿಲ್ಲ. ಅದರ ಮೇಲೆ, ಸಂದಿಗ್ಧ ಕಾರಣಗಳ ಆಧಾರದ ಮೇಲೆ ಮಹಾತ್ಮಾಗಾಂಧಿ ಮತ್ತು ದಿವಂಗತ ದೀನಬಂಧು ಅಂಡ್ರ್ಯೂಸರು ಅದರ ವಿರುದ್ಧವಾಗಿ ತಮ್ಮ ಅಭಿಪ್ರಾಯದ ಬೆಂಬಲವಿತ್ತರು.

ವರ್ಸಾಯ ಒಪ್ಪಂದಕ್ಕೆ ಸಹಿ ಬಿದ್ದ ಬಳಿಕ ಜರ್ಮನ್ ಪೂರ್ವ ಆಫ್ರಿಕವನ್ನು ಇಬ್ಭಾಗ ಮಾಡಿ, ದೊಡ್ಡ ತುಂಡನ್ನು ಬ್ರಿಟನ್ನಿನ ಅಧೀನತಕ್ಕೂ ಉಳಿದ ಪ್ರದೇಶವನ್ನು ಕಾಂಗೋ ದೌರ್ಜನ್ಯದಲ್ಲಿ ಹೆಸರಾದ ಹಾಗೂ ಆ ಬಳಿಕ ೧೯೩೯ ರಲ್ಲಿ ರೌನ್ಡ ಮತ್ತು ಯುರುಂಡಿಗಳಲ್ಲಿಯ ಭಾರತೀಯ ವ್ಯಾಪಾರಿಗಳನ್ನು ಪೀಡಿಸಿ ಭಾರತಕ್ಕೆ ತನ್ನ ಪರಿಚಯ ಮಾಡಿಕೊಟ್ಟ ಬೆಲ್ಜಿಯಂ ಸರಕಾರದ ಅಧೀನತಕ್ಕೂ ಒಳಪಡಿಸುವ ವ್ಯವಸ್ಥೆಯಾಯಿತು.

### ಹಿಂದೀ ಆಯಾತಗಳ ಮೇಲೆ ನಿರ್ಬಂಧಗಳು

ಈ ಮೇಲೆ ಹೇಳಿದ ಅಧೀನತದ ವ್ಯವಸ್ಥೆಯ ಪ್ರಕಾರ ವರ್ಸಾಯ ಒಪ್ಪಂದಕ್ಕೆ ತಮ್ಮ ಹಕ್ಕಿನಿಂದ ಸಹಿ ಹಾಕಿದ ದೇಶಗಳೆಲ್ಲ ಉಕ್ತ ಶಾಸನ ವ್ಯವಸ್ಥೆಗೊಳಗಾದ ರಾಜ್ಯಕ್ಕೆ ತಮ್ಮ ದೇಶೀಯರನ್ನು ಸಮಾನವಾದ ರಾಜಕೀಯ ಹಕ್ಕುಗಳ ಹಾಗೂ ಆರ್ಥಿಕಾವಕಾಶಗಳ ಬಳಕೆಗೆ ಅರ್ಹರಾಗುವ ಕರಾರಿನ ಮೇರೆಗೆ ಕಳುಹಬಹುದೆಂದು ಒಡಂಬಡಿಕೆಯಾಗಿತ್ತು. ಆದರೆ 'ಹೊಸ ವ್ಯವಸ್ಥೆಯ ಅಧೀನತದ ಪ್ರಾರಂಭದಿಂದಲೇ ೧೮೯೦ ರಲ್ಲಾದ ಜರ್ಮನ್ ಆಕ್ರಮಣಕ್ಕೂ ಮೊದಲು ಬಂದು ತಾಂಗನೀಕದಲ್ಲಿ ನೆಲಸಿದ ಹಾಗೂ ಅನಂತರ ಬಂದು ವಸತಿನಿಂದ ಮತ್ತು ಸರಕಾರದ ಅಧೀನಕ್ಕೆ ಯುದ್ಧಾವಶ್ಯಕತೆಗಳಿಂದ ಆಗಲ್ಲಿದ್ದು ಕರೆಸಿಕೊಂಡ ಹಿಂದೀಯರನ್ನು ಕೆಳ ಅಂತಸ್ತಿನಲ್ಲಿ ಇಡಲಾಯಿತು. ವ್ಯಾಪಾರದ ಹಿಂದೀಯರಿಗೆ ಸವಲತ್ತುಗಳನ್ನು ಕಡಿಮೆ ಮಾಡಿದ ಭೇದಬುದ್ಧಿಯ ಶಾಸನವು ೧೯೨೩ ರಲ್ಲಿ ಪಾಸಾದಾಗ ೫೩ ದಿನಗಳ ಒಂದು ಮುಷ್ಕರ ನಡೆಯಿತು. ೧೯೩೬ ರಲ್ಲಿ ಪೂರ್ವ ಆಫ್ರಿಕದ ಮಂಡಳದ ಸಂಘವು ಹಿಂದೀ ವಸ್ತುಗಳ ಆಯಾತದ ಮೇಲೆ ಕೆಲವು ಅನ್ಯಾಯದ ನಿರ್ಬಂಧಗಳನ್ನು ಹೇರಿತು. ವಿದ್ಯಾಭ್ಯಾಸವನ್ನು ಮೂಲನಿವಾಸಿಗಳಲ್ಲದ ಬಿಳಿಯರಿಗೆ ಬೇರೆಯಾಗಿ ಕೊಡುವ ವ್ಯವಸ್ಥೆಯಾಯಿತು. ೧೯೩೮ ರಲ್ಲಿ ಹಿಂದೀ ವಿರುದ್ಧವಿರುವ ಕೆನ್ಯದೊಡನೆ ಮಹಾಮಂಡಲ ಮಾಡಿಕೊಂಡು ಸೇರಲು ತಾಂಗನೀಕದ ಬ್ರಿಟಿಶ ವಸಾಹತು ಒಂದು ಬಹುದೊಡ್ಡ ಪ್ರಯತ್ನ ಮಾಡಿತು. ೧೯೪೧ ರಲ್ಲಿ ಪೂರ್ವ ಆಫ್ರಿಕದಲ್ಲಿ ಒಂದೇ ತೆರನಾದ ವಾಣಿಜ್ಯಸಂಬಂಧಿ ಶಾಸನಗಳನ್ನು ಅಮಲಿನಲ್ಲಿ ತರಬೇಕೆಂದು ನಿರ್ಣಯವಾಯಿತು. ಮತ್ತು ಅಧೀನತದ ಕಾರಭಾರದಲ್ಲಿ ತಾಂಗನೀಕವು ಬ್ರಿಟಿಶ ಸಾಮ್ರಾಜ್ಯದ ಒಂದು ಪೂರಕ ಭಾಗವೆಂದು ಪ್ರಕಟಿಸಲಾಯಿತು.

### ಹಿಂದೀ ವಿರುದ್ಧ ಧೋರಣ

ವರುಷ ಸಂದ ಹಾಗೆ ತಾಂಗನೀಕದಲ್ಲಿ ಹಿಂದೀಯರ ಸ್ಥಾನವು ಕುಸಿದು ಹೋಗಿ ಅವರು ಕೆನ್ಯದಲ್ಲಿ ಇದ್ದ ಸ್ಥಿತಿಗೇ ಬಂದು ಮುಟ್ಟಿದರು: ಅಧೀನತದ ಧೋರಣವು ದಕ್ಷಿಣ ಆಫ್ರಿಕದಿಂದಲೇ ಹೆಚ್ಚು ಹೆಚ್ಚಾಗಿ ಸ್ಫೂರ್ತಿ ಪಡೆಯುತ್ತ ಬಂದಿತು. ೧೯೩೮ ರಲ್ಲಿ "ಡೇಲಿ ಮೇಲ್" ಪತ್ರಿಕೆಯ ಪ್ರಸಿದ್ಧ ಸಾಗರೋತ್ತರ ವಾರ್ತಾ ಸಂಗ್ರಾಹಕನಾದ ನೆಗ್ಲಿ ಫಾರ್ಸನ್ನನು ತಾಂಗನೀಕ ಕೆನ್ಯಗಳನ್ನು ತಿರುಗಿ ಜರ್ಮನಿಗೆ ಕೊಡಬೇಕೆಂಬುದನ್ನು ಒತ್ತಿ ಹೇಳುತ್ತಿರುವ ಹಿಟ್ಲರನ ವಿರುದ್ಧ ತಾಂಗನೀಕವನ್ನು ಬ್ರಿಟನ್ನು ಕಾಯಿದೆಯಂತೆ ತನ್ನ ಸಾಮ್ರಾಜ್ಯಕ್ಕೆ ಸೇರಿಸಿಕೊಳ್ಳಬೇಕೆಂದು ಬ್ರಿಟಿಶ ವಲಸೆಗಾರರು ಹೂಡಿದ ಚಳವಳದ ನಿಜ ಸ್ಥಿತಿಯನ್ನರಿಯಬೇಕೆಂದು ತಾಂಗನೀಕಕ್ಕೆ ಭೆಟ್ಟಿಯಿತ್ತನು. ಹಿಂದೀಯರ ಸ್ಥಾನದ ಬಗ್ಗೆ ಹೇಳಿಕೆ ಕೊಡಬೇಕೆಂದು ಅವನು ಕೇಳಿದಾಗ ನಾನು ಕೊಟ್ಟೆ. ೧೯೩೯-೪೦ ರಲ್ಲಿ ಈ ಹೇಳಿಕೆಯನ್ನು ಫಾರ್ಸನ್ನನು ತನ್ನ "ದೇವರ ಬೆನ್ನಹಿಂದೆ" ಎಂಬ ಪುಸ್ತಕದಲ್ಲಿ ಸಂಪೂರ್ಣವಾಗಿ ಪ್ರಕಟಿಸಿದ್ದಾನೆ. ಪೀಡಕ ವಸಾಹತೆನಿಸಿದ ಕೆನ್ಯವು ತಾಂಗನೀಕಕ್ಕೆ ಸೇರಿಸಲ್ಪಟ್ಟರೆ ತಾಂಗನೀಕದ ಆರ್ಥಿಕ ಪ್ರಗತಿಯನ್ನು ಅದು ತಡೆಹಿಡಿಯುತ್ತದೆಂದು ನನ್ನ ಸಹಿಯ ಮೇಲೆ ಹೇಳಿಕೆಕೊಟ್ಟೆ. ಸುಂಕದ ಸಂಘ (ಒಕ್ಕೂಟ) ದಿಂದ ತಾಂಗನೀಕಕ್ಕೆ ೧೬೦೦ ಪೌಂಡುಗಳ ಖರ್ಚು ಬಿದ್ದಿತು. ಕೆನ್ಯ ಮತ್ತು ಯುಗಾಂಡಗಳ ರೈಲು ಮತ್ತು ಬಂದರುಗಳ ಸ್ಪರ್ಧೆಯು ತಾಂಗ ಹಾಗೂ ದಾರೆಸಲಾಂ ರೇವುಗಳೊಳಗಿನ ತಿಕ್ಕಾಟಕ್ಕೆ ಕಾರಣವಾಯಿತು. ಅದರಿಂದ ಅಧಿರಾಜ್ಯದ ರೈಲಿನ ಸಂಸ್ಥೆ ಕೂಡ ಬಡವಾಗಿ ಹೋಯಿತು.

"ಕೆನ್ಯವೊಂದು ವಸಾಹತು ಮತ್ತು ತೆಂಕಣ ಆಫ್ರಿಕವೊಂದು ಒಕ್ಕೂಟ. ಒಕ್ಕೂಟದಲ್ಲಿ ಹಿಂದೀಯರು ನಾನಾ ವಿವಿಧ ಭೇದಬುದ್ಧಿಜನ್ಯ ನಿರ್ಬಂಧಗಳಿಂದ ನರಳುತ್ತಾರೆ. ಕೆನ್ಯದಲ್ಲಿ ಹಿಂದೀಯರು ಪ್ರಸ್ಥ ಭೂಮಿಗಳಲ್ಲಿ ವಸತಿ ಇಲ್ಲಬಾರದೆಂದು ಪ್ರತಿಬಂಧಿಸಲಾಗಿದೆ. ಬ್ರಿಟನ್ನು ತಾಂಗನೀಕವನ್ನು ತನ್ನ ಸಾಮ್ರಾಜ್ಯಕ್ಕೆ ಸೇರಿಸಿಕೊಂಡು ಕೆನ್ಯದೊಡನೆ ಬಿಳಿಯರ ಮಧ್ಯ ಮತ್ತು ಪೂರ್ವ ಆಫ್ರಿಕ ಸಾಮಂತ ರಾಜ್ಯವನ್ನು ಕಟ್ಟಿ ದಕ್ಷಿಣ ಆಫ್ರಿಕದ ಒಕ್ಕೂಟದಂತೆ ಸವರ್ಣ ವಿರುದ್ಧ ಧೋರಣ ಕೈಕೊಳ್ಳಬಹುದೆಂದು ಹಿಂದೀಯರು ಗಾಬರಿಗೊಳಗಾಗಿದ್ದಾರೆ." (ಪೂರ್ವೋಕ್ತ ಪುಸ್ತಕದ ಸುಲಭ ದರದ ಪ್ರತಿಯ ೧೧೯ ನೆಯ ಪುಟ).

### ವಲಸೆಗೆ ನಿರ್ಬಂಧಗಳು

೧೯೪೫ರಲ್ಲಿ ಐರೋಪ್ಯ ಪ್ರಚಾರದಿಂದ ಮೋಸಹೋಗಿ ಕೆನ್ಯದಲ್ಲಿಯ ಹಿಂದೀ ಮುಖಂಡರು ಹಿಂದೀಯರು ತಾಂಗನೀಕ ಸಂರಕ್ಷಣಾ ಸಂಘವನ್ನು ಸೇರುವುದಕ್ಕೆ ಬೆಂಬಲವಿತ್ತರು. ಸುದೈವದಿಂದ ಅವರ ಭ್ರಾಂತಿಯು ಬೇಗ ಬಯಲಾಗಿ ಅವರು ತಮ್ಮ ಬೆಂಬಲವನ್ನು ಹಿಂತೆಗೆದುಕೊಂಡರು. ಯುದ್ಧಕಾಲದಲ್ಲಿ ತಾಂಗನೀಕದ ಅಧೀನತಗಾರರು ಹಿಂದೀ ವಿರುದ್ಧ ಧೋರಣವನ್ನು ವಹಿಸಿ ಹಿಂದೀಯರ ವಲಸೆಯನ್ನು ನಿರ್ಬಂಧಿಸಿದ್ದಲ್ಲದೆ ಹಿಂದೀಯರ ಆರ್ಥಿಕೋನ್ನತಿಯ ಅವಕಾಶಗಳಿಗೂ ತಡಿತ ಹಾಕಿದರು. ಕ್ರೀಚ್ ಜೋನ್ಸನ ಕೈಕೆಳಗಿನ ಕೂಲಿಕಾರ ವಸಾಹತು ಮಂತ್ರಿಮಂಡಲವು ಸರ್ವವರ್ಣದವರಿಗೂ ಸಮಾನ ಪ್ರಾತಿನಿಧ್ಯ ಕೊಡುವುದಾಗಿ ಹೇಳಿ ಕೆನ್ಯ, ತಾಂಗನೀಕ, ಯುಗಾಂಡಗಳ ನಿಕಟ ಒಕ್ಕೂಟಕ್ಕೆ ಹಿಂದೀಯರ ಬೆಂಬಲ ಪಡೆದು ಕಡೆಯಲ್ಲಿ ೨೧೦ ನೆಯ ಆಜ್ಞಾಪತ್ರದಲ್ಲಿ ಐರೋಪ್ಯ ಜನಾಂಗಕ್ಕೆ ಸಲ್ಲದ ಹೆಚ್ಚಿನ ಪ್ರಾತಿನಿಧ್ಯವನ್ನು ಕೇಂದ್ರ ಅಧೀನ ಮಂಡಲದಲ್ಲಿ ಕೊಡಲಾಯಿತು. ಹಿಂದೀಯರು ತಮ್ಮ ಒಪ್ಪಿಗೆಯನ್ನು ಹಿಂತೆಗೆದುಕೊಳ್ಳುವ ಒತ್ತಾಯದ ಪ್ರಸಂಗವುಂಟಾಯಿತು.

### ಹಿಂದೀ ಹಿತಕ್ಕೆ ದ್ರೋಹ

ಹಿಂದುಸ್ತಾನಕ್ಕೆ ದ್ರೋಹವಾಡುವುದು ಇಲ್ಲಿಗೆ ನಿಲ್ಲಲಿಲ್ಲ. ತಾಂಗನೀಕದಲ್ಲಿ ಬ್ರಿಟನ್ನಿನ ಹಿತಗಳಿಗಿಂತ ಹಿಂದೀ ಹಿತಗಳು ಬಹಳ ಹೆಚ್ಚಿನವಿದ್ದರೂ ತನ್ನ ಸ್ವಂತ ಹಕ್ಕಿನಿಂದ ಹಿಂದುಸ್ತಾನವು ವರ್ಸಾಯ ಒಪ್ಪಂದಕ್ಕೆ ಸಹಿಹಾಕಿದ್ದರೂ ಅದು ಸಂಯುಕ್ತ ರಾಷ್ಟ್ರಸಂಘದ ಸಮಾನ ಸದಸ್ಯತ್ವ ಪಡೆದಿದ್ದರೂ ಸ್ವಾತಂತ್ರ್ಯವು ಅದೂರದರ್ಶಿಯಾಗಿದ್ದರೂ ಬ್ರಿಟನ್ ಮತ್ತು ದಕ್ಷಿಣ ಆಫ್ರಿಕಗಳು "ತಾಂಗನೀಕದ ಪಾಲಕತ್ವದಲ್ಲಿ ಹಿಂದುಸ್ತಾನಕ್ಕೆ ನೇರವಾಗಿ ಯಾವ ಸಂಬಂಧವೂ ಇಲ್ಲ" ಎಂದು ತರ್ಕಮಾಡಿವೆ: ಅದೃಷ್ಟವಶದಿಂದ ಸಂಯುಕ್ತ ರಾಷ್ಟ್ರಸಂಘದ ಕೌನ್ಸಿಲ್ಲಿನ ಕಳೆದ ಸಭೆಯಲ್ಲಿ ಭಾರತವು, ಸಮರ್ಥವಾಗಿ ದಕ್ಷತೆಯಿಂದ, ಅವು ತಮ್ಮ ತರ್ಕವನ್ನು ಸಿದ್ಧಮಾಡಿಕೊಡಬೇಕೆಂದು ಆಹ್ವಾನವಿತ್ತಿತು. ಆದರೆ ಆ ಪ್ರಶ್ನೆಯು ಇನ್ನೂ ಕೊನೆಯದಾಗಿ ನಿರ್ಣಯಿಸಲ್ಪಟ್ಟಿಲ್ಲ.

### ಹಿಂದುಸ್ತಾನವು ಪಾಲಕತ್ವ ವಹಿಸಬೇಕು

ಹಿಂದುಸ್ತಾನವೀಗ ಒಂದು ಸ್ವತಂತ್ರ ಸಾಮಂತ ರಾಜ್ಯವಾಗಿರುವುದರಿಂದ ತಾನೊಂದೇ ಇಲ್ಲವೆ ಪಾಕಿಸ್ತಾನದ ಜೊತೆಗೆ ಸಂಯುಕ್ತರಾಷ್ಟ್ರ ಸಂಘದಿಂದ ನೇರವಾಗಿ ತಾಂಗನೀಕದ ಪಾಲಕತ್ವವನ್ನು ಪಡೆವ ಹಕ್ಕನ್ನು ಸಾಧಿಸಬೇಕು. ಹಿಂದುಸ್ತಾನ ಪಾಕಿಸ್ತಾನಗಳೆರಡೂ ಈಗಲೂ ಬ್ರಿಟನ್ನಿನೊಡನೆ ಸೇರಿದ ಸ್ವತಂತ್ರ ರಾಷ್ಟ್ರಗಳ ಅಧಿಪತ್ಯದ ಸದಸ್ಯಗಳೆನಿಸಿರುವುದರಿಂದ ಮತ್ತು ದಕ್ಷಿಣ ಆಫ್ರಿಕದ ಒಕ್ಕೂಟವು ಇನ್ನೂ ಸಂಯುಕ್ತರಾಷ್ಟ್ರ ಸಂಘವನ್ನು ಎದುರಿಸಿಯೇ ನಡೆದುಕೊಳ್ಳುತ್ತಿರುವುದರಿಂದ ನಾವು ತಾಂಗನೀಕದ ಪಾಲಕತ್ವದ ಅಧೀನತವನ್ನು ಭಾರತಕ್ಕೆ [ಇಲ್ಲವೆ ಭಾರತ ಮತ್ತು ಪಾಕಿಸ್ತಾನಗಳಿಗೆ ಒಟ್ಟಿಗೆ] ದೊರೆವಂತೆ ಮಾಡಬೇಕೆಂದು ಬ್ರಿಟನ್ನನ್ನು ಕೇಳಬೇಕು.

ಬ್ರಿಟನ್ನಿಗೆ ಇದರ ಮೇಲಿರುವ ಹಕ್ಕುಗಳಿಗಿಂತ ನಮ್ಮವೇ ಹೆಚ್ಚಿನವು. ೧೯೩೧ ರಲ್ಲಿ ತಾಂಗನೀಕದಲ್ಲಿ ೨೩ ಸಾವಿರ ಹಿಂದೀಯರಿದ್ದರು. ೧೯೩೮ ರಲ್ಲಿ ಆ ಸಂಖ್ಯೆ ೨೫ ಸಾವಿರಕ್ಕೇರಿತು. ೧೯೪೩ ರಲ್ಲಿ ೪೫೦೯೯ ಏಶಿಯನ್ನರಿರುವರೆಂದೂ ಅವರಲ್ಲಿ ೩೫ ಸಾವಿರ ಜನರು ಹಿಂದೀಯರೆಂದೂ ಗಣಿಸಲಾಯಿತು. ವಿಟೀಕರನ ಇತ್ತೀಚಿನ ಪಂಚಾಂಗದಲ್ಲಿ ೧೯೪೩ ರಲ್ಲಿ ತಾಂಗನೀಕದ ಐರೋಪ್ಯ ಜನಸಂಖ್ಯೆ ೧೬೨೦೯ ಎಂದು ಕೊಡಲಾಗಿದೆ. ೧೯೩೮ ಹಿಂದೀಯರ ವಶದಲ್ಲಿ ೨,೭೮,೪೭೩ ಎಕರೆಗಳಷ್ಟು ಬೇಸಾಯದ ಭೂಮಿಯಿತ್ತು; ಬ್ರಿಟಿಶರ ವಶದಲ್ಲಿ ೪೩೫ ಜಮೀನುದಾರರಿಂದ ಒಟ್ಟು ೭,೭೫,೦೦೨ ಎಕರೆಗಳಿದ್ದವು. ಅದರೆ ತದ್ವಿರುದ್ಧವಾಗಿ ನಗರಸ್ಥ ಆಸ್ತಿ ಹಿಂದೀಯರಿಗೆ ಅತಿ ಹೆಚ್ಚಾಗಿತ್ತು.

ನೆಗ್ಲಿ ಫಾರ್ಸನ್ನನು ತನ್ನ "ದೇವರ ಬೆನ್ನಹಿಂದೆ" ಎಂಬ ಪುಸ್ತಕದಲ್ಲಿ ಹೇಳುತ್ತಾನೆ: "ದಾರೆಸಲಾಮಿನಲ್ಲಿ ಎಲ್ಲ ಉಪಹಾರ ಗೃಹಗಳೂ ಹಿಂದೀಯರವೇ. ಅಲ್ಲಿದ್ದ ಮೂರು ಚಲನಚಿತ್ರ ಮಂದಿರಗಳೂ ಹಿಂದೀಯರಿಗೆ ಸೇರಿದವೇ; ಅವುಗಳಲ್ಲಿ ಎರಡನ್ನು ಅವರೇ ನಡೆಸುತ್ತಾರೆ. ನಗರದ ಮುಖ್ಯ ಸಂತೆಪೇಟೆಯಾದ ಅಕೇರಿಯದಲ್ಲಿ ಕೇವಲ ನಾಲ್ಕು ಕಟ್ಟಡಗಳನ್ನು ಬಿಟ್ಟು ಉಳಿದ ಎಲ್ಲ ಗಾಜಿನ ಕಿಟಕಿಯ ಸುಂದರವಾದ ಕಾರ್ಯಾಲಯ ಹಾಗೂ ಅಂಗಡಿಗಳ ಕಟ್ಟಡಗಳು ಹಿಂದೀಯರವೇ ಆಗಿವೆ. ಮತ್ತು ಜರ್ಮನರು ಏನೂ ಮಾಡದಿದ್ದ ಅಲ್ಲಿ ಅವರೇ ಸ್ವತಃ ಬಹುಪಕ್ಷ ಆ ಎಲ್ಲ ಕಟ್ಟಡಗಳನ್ನೂ ನಿರ್ಮಿಸಿದ್ದಾರೆ."

"ತಾಂಗನೀಕದ ದೊಡ್ಡ ಪಟ್ಟಣಗಳಲ್ಲಿ ನೂರಕ್ಕೆ ೯೦ ರಂತೆಯೂ ಸಣ್ಣ ಪಟ್ಟಣಗಳಲ್ಲಿ ನೂರಕ್ಕೆ ನೂರರಂತೆಯೂ ಹಿಂದೀಯರೇ ಹಣ ನುದಾರರಾಗಿದ್ದಾರೆ. (ಉಕ್ತ ಪುಸ್ತಕದ ೧೧೬ ನೆಯ ಪುಟದಲ್ಲಿ)

### ವ್ಯಾಪಾರ ವಾಣಿಜ್ಯ ಹಿತಗಳು

ವ್ಯಾಪಾರ ವಾಣಿಜ್ಯಗಳಲ್ಲಿ ತಾಂಗನೀಕದಲ್ಲಿ ಹಿಂದೀ ಹಿತಗಳು ಬಹಳ ಹೆಚ್ಚಾಗಿವೆ. ಪುನಃ

—೧೬ನೇ ಪುಟಕ್ಕೆ

## Education IN U. S. S. R.

Vora & Co Publishers Ltd 3-4 Round Buildings Bombay 2 P P 52 Price Rs 1—4—0

ಸಮಾಜ ಸಮತಾವಾದಿ ರಶಿಯದಲ್ಲಿ ಶೈಕ್ಷಣಿಕ ಬೆಳವಣಿಗೆ ಹೇಗೆ ಆಗಹತ್ತಿದೆಂಬದನ್ನು ಈ ಪುಟ್ಟ ಪುಸ್ತಕದಲ್ಲಿ ಅಂಕಿಸಂಖ್ಯೆಗಳನ್ನು ಕೊಟ್ಟು ತಿಳಿಸಲಾಗಿದೆ. ಝಾರರ ಆಳಿಕೆಯಲ್ಲಿ ಸಾಕ್ಷರತೆ ರಶಿಯವು ಹಿಂದುಸ್ತಾನದಂತೆಯೆ ಸಾಕ್ಷರತೆ ರಶಿಯವು ಹಿಂದುಸ್ತಾನದಂತೆಯೆ ಯಲ್ಲಿ ಬಹಳ ಹಿಂದೆ ಬಿದ್ದಿತ್ತು. ಆದರೆ ರಶಿಯದ ಕ್ರಾಂತಿಯ ನಂತರ ಸ್ಥಾಪಿತವಾದ ಸೋವಿಯಟ ಯೂನಿಯನ್ ಸರಕಾರದವರು ಶಿಕ್ಷಣದ ಕಡೆಗೆ ಬಹಳ ಗಮನ ಕೊಟ್ಟು ಈ ಇಪ್ಪತ್ತೆಂಟು ವರುಷ ಗಳಲ್ಲಿ ಬಹುತರ ಎಲ್ಲ ರಶಿಯನ್‌ರಿಗೆ, ಮಕ್ಕಳಿಗಷ್ಟೇ ಅಲ್ಲ ಪ್ರೌಢರಿಗೆ ಕೂಡ, ಅಕ್ಷರ ಜ್ಞಾನ ಮಾಡಿಕೊಟ್ಟಿರುವರು. ಕಡ್ಡಾಯದ ಮುಕ್ತ ಪ್ರಾಥಮಿಕ ಶಿಕ್ಷಣವನ್ನು ಪ್ರಾರಂಭಿಸಿರುವರು. ಪ್ರಾಥಮಿಕ ಅಭ್ಯಾಸದ ನಂತರದ ಶಿಕ್ಷಣಕ್ಕಾದರೂ ಬಹಳ ಕಡಿಮೆ ಫೀ ತೆಗೆದುಕೊಳ್ಳುತ್ತಿರುವದರಿಂದ ಎಲ್ಲರೂ ಮಾಧ್ಯಮಿಕ ಮತ್ತು ಉಚ್ಚ ಶಿಕ್ಷಣವನ್ನು ಸಹಜವಾಗಿ ಪಡೆಯಬಹುದಾಗಿದೆ. ಬರಿ ಅಕ್ಷರ ಶಿಕ್ಷಣ ಉಪಯುಕ್ತವಾಗದೆಂದು ಭಾವಿಸಿ ಕೆಲಾಕುಶಲರನ್ನು ತರಬೇತು ಮಾಡುವದರ ಕಡೆಗೂ ಯೋಗ್ಯ ಗಮನವನ್ನು ಕೊಡಲಾಗಿದೆ. ಎಂಜಿನಿಯರರು, ಡಾಕ್ಟರರು, ದಾಯಿಗಳು, ಬಿಕ್ಕಲತನದ ಕೆಲಸಗಾರರು ಮೊದಲಾದವರನ್ನು ಸಿದ್ಧಗೊಳಿಸುವ ಶಾಲೆಗಳನ್ನು ಮೊದಲಿನಿಂದಲೆ ತೆರೆದಿರುವರು. ಮಾತೃಭಾಷೆಯಲ್ಲಿ ಶಿಕ್ಷಣ ಕೊಡುತ್ತಿರುವುದರಿಂದ ಶಿಕ್ಷಣ ಪ್ರಗತಿ ಭರದಿಂದ ಸಾಗಿದೆ. ರಶಿಯದಲ್ಲಿರುವ ಬೇರೆ ಬೇರೆ ಜನಾಂಗಗಳಿಗೂ ಉಪಯುಕ್ತವಾಗುವಂತೆ ಶಿಕ್ಷಣ ಕೊಡುತ್ತಿರುವದರಿಂದ ಒಂದು ಬಗೆಯ ಸಾಂಸ್ಕೃತಿಕ ಕ್ರಾಂತಿಯನ್ನೆ ರಶಿಯವು ಸಾಧಿಸಿದೆಂದು ಹೇಳಬಹುದು.

ಕಳೆದ ೨೦೦ ವರುಷಗಳ ಝಾರರ ಆಳಿಕೆಯಲ್ಲಿ ಕಟ್ಟಿಸಲ್ಪಟ್ಟ ಶಾಲೆಗಳಿಗಿಂತ ಹೆಚ್ಚು ಶಾಲೆಗಳನ್ನು ಯೂನಿಯನ್ನಿನ ೨೮ ವರುಷಗಳ ಆಳಿಕೆಯಲ್ಲಿ ಕಟ್ಟಲಾಗಿದೆಂದು ಹೇಳಿದರೆ ಶಿಕ್ಷಣ ಪ್ರಗತಿಯ ಸ್ಪಷ್ಟ ಕಲ್ಪನೆ ಬಾರದಿರದು. ಕಳೆದ ಮಹಾಯುದ್ಧದಲ್ಲಿ ಕಂಡು ಬಂದ ಆವಶ್ಯಕತೆಗಳನ್ನರಿತುಕೊಂಡು ಯುನಿಯನ್ ಸರಕಾರದವರು ತಮ್ಮ ಯುದ್ಧೋತ್ತರ ಶಿಕ್ಷಣ ಯೋಜನೆಯನ್ನು ನಿರ್ಧರಿಸಿಕೊಂಡಿರುವರು. ಅಕ್ಷರ ಶಿಕ್ಷಣದ ಜತೆಗೇ ದೇಶದ ಸಾರ್ವಾಂಗಿಕ ಅಭಿವೃದ್ಧಿಗಾಗಿ ಬೇಕಾಗುವ ವಿವಿಧ ತಜ್ಞರನ್ನು ತರಬೇತಿಗೊಳಿಸುವ ಯೋಜನೆಯನ್ನು ಇಟ್ಟುಕೊಂಡಿದ್ದು ಅಭಿನಂದನೀಯವಾಗಿದೆ. ಬ್ರಿಟಿಶರ ೧೫೦ ವರ್ಷಗಳ ಆಳಿಕೆಯಲ್ಲಿ ಭಾರತದಲ್ಲಿ ಶಿಕ್ಷಣ ಪ್ರಗತಿ ಎಷ್ಟು ಮಂದಗತಿಯಿಂದ ಸಾಗಿದೆಂಬದು ಸರ್ವಶ್ರುತ. ಸ್ವತಂತ್ರ ಭಾರತವಿಂದು ರಶಿಯದ ಈ ಮಾದರಿಯನ್ನಿಟ್ಟುಕೊಂಡು ಭಾರತೀಯರನ್ನೆಲ್ಲ ಸಾಕ್ಷರರನ್ನಾಗಿ ಮಾಡುವುದಲ್ಲದೆ ಅವರನ್ನು ವಿವಿಧ ಕಲೆಗಳಲ್ಲಿ ತರಬೇತಿ ಮಾಡಿ ದೇಶದ ಸಾರ್ವಾಂಗಿಕ ಅಭಿವೃದ್ಧಿ ಸಾಧಿಸಲು ಅವರ ಸಹಾಯ ಪಡೆಯಬೇಕು. ಇಂಥ ಉಪಯುಕ್ತ ಪುಸ್ತಕವನ್ನು ವೋರಾ ಕಂಪನಿಯವರು ಪ್ರಸಿದ್ಧಿಸಿದ್ದು ಅಭಿನಂದನೀಯವಾಗಿದೆ. ಆಂಗ್ಲ ಭಾಷೆಯನ್ನು ಬಲ್ಲವರೆಲ್ಲ ಇದರ ಉಪಯೋಗ ಮಾಡಿಕೊಳ್ಳಬೇಕೆಂದು ಸೂಚಿಸುತ್ತೇವೆ.

## Indian States in Free India

by. Kevalram C Oza. PP. 80 Price Rs 2—0—0 Publishers Vora & Co. Ltd. 3—4 Round buildings Bombay 2

ಬ್ರಿಟಿಶರು ಹಿಂದುಸ್ತಾನದಲ್ಲಿ ಅಧಿಕಾರ ತ್ಯಾಗ ಮಾಡಿ ಆಗಸ್ಟ ೧೫ ಕ್ಕೆ ಸಾಮಂತ ಸರಕಾರಗಳನ್ನು ಸ್ಥಾಪಿಸಿ ಬಿಟ್ಟಿದ್ದರಿಂದ ಹಿಂದುಸ್ತಾನದಲ್ಲಿರುವ ಸಂಸ್ಥಾನಿಕರ ಸಮಸ್ಯೆ ಮೊದಲಿಗಿಂತ ಹೆಚ್ಚು ಜಟಿಲವಾಗಿತ್ತು. ಆದರೆ ಬಹುತರ ಎಲ್ಲ ಸಂಸ್ಥಾನಿಕರು ಈಗ ಹಿಂದೀ ಒಕ್ಕೂಟ ಸರಕಾರವನ್ನು ಸೇರಿಕೊಂಡು ಭಾರತದ ಭಾವೀ ಘಟನೆಯನ್ನು ಸಿದ್ಧಪಡಿಸುವಲ್ಲಿ ಮತ್ತು ಆಡಳಿತದಲ್ಲಿ ಭಾಗವಹಿಸುವಲ್ಲಿ ಅಣಿಯಾದ್ದರಿಂದ ಆ ಸಮಸ್ಯೆ ಈಗ ಬಹಳ ಮಟ್ಟಿಗೆ ಹಗುರಾಗಿದೆ. ಆದರೂ ನರೇಂದ್ರರು ಇನ್ನೂ ತಮ್ಮ ಸ್ವಚ್ಛಂದ ಆಳಿಕೆಯನ್ನು ಬಿಟ್ಟುಗೊಟ್ಟು ಪ್ರಜೆಗಳಿಗೆ ಹೊಣೆಗಾರವಾದ ಸರಕಾರವನ್ನು ಸ್ಥಾಪಿಸಲು ಮುಂದೆ ಬಾರದಿದ್ದುದು ವಿಷಾದಕರವಾಗಿದೆ. ಶ್ರೀ ಓಝಾ ಅವರು ಪಿನ್ಸಿಪಲ್ ಡೆಮೊಕ್ರೆಟ ಪೊಲಿಟಿಕಲ್ ಏಜಂಟರಾಗಿರುವದರಿಂದ ಸಂಸ್ಥಾನದ ಸಮಸ್ಯೆಗಳನ್ನೆಲ್ಲ ಆಳವಾಗಿ ಅಭ್ಯಸಿಸಿದವರಿರುವರು. ಇವರು ಸಂಸ್ಥಾನಗಳ ಎಲ್ಲ ಬಗೆಯ ಜಟಿಲ ಸಮಸ್ಯೆಗಳನ್ನು ಈ ಪುಸ್ತಕದಲ್ಲಿ ಎತ್ತಿ ಅವುಗಳಿಗೆಲ್ಲ ಸಮಾಧಾನಕರವಾದ ಉತ್ತರವನ್ನು ಕೊಡಲು ಪ್ರಯತ್ನಿಸಿದ್ದಾರೆ. ಗ್ರಂಥಕರ್ತರು ಈ ಪುಸ್ತಕದಲ್ಲಿ ಪಟ್ಟ ಅಭಿಪ್ರಾಯವು ಸರ್ವಮಾನ್ಯವಾಗಿರದಿದ್ದರೂ ಸಂಸ್ಥಾನಗಳ ಜಟಿಲ ಸಮಸ್ಯೆಯನ್ನು ಬಿಡಿಸಲು ಅವರು ಯಾವ ಪರಿಹಾರವನ್ನು ಸೂಚಿಸಿದ್ದಾರೆಂಬದನ್ನು ತಿಳಿದುಕೊಳ್ಳುವದು ಅವಶ್ಯವಾಗಿದೆ. ಆದುದರಿಂದ ಸಂಸ್ಥಾನ ಸಮಸ್ಯೆಯ ಅಭ್ಯಾಸಿಗಳು ಅವಶ್ಯವಾಗಿ ಈ ಪುಸ್ತಕವನ್ನು ಓದಬೇಕು. ತಕ್ಕಕಾಲಕ್ಕೆ ಈ ಪುಸ್ತಕವನ್ನು ಪ್ರಸಿದ್ಧಿಸಿದ್ದಕ್ಕಾಗಿ ವೋರಾ ಕಂಪನಿಯವರನ್ನು ಅಭಿನಂದಿಸಬೇಕಾದುದು ಕ್ರಮಪ್ರಾಪ್ತವಾಗಿದೆ.




## Indian Parties & Politics.

By S. Natrajan. Oxford Pamphalets on Indian Affairs No 41 As Six only.

ಇಂಡಿಯನ್ ಸೋಶಲ್ ರಿಫಾರ್ಮರ ಮತ್ತು ಫ್ರೀ ಪ್ರೆಸ್ ಜನರಲ್‌ದ ಸಂಪಾದಕರಾಗಿರುವ ಶ್ರೀ ನಟರಾಜನರು ಹಿಂದುಸ್ತಾನದಲ್ಲಿ ಕಾಂಗ್ರೆಸ್ಸು ೧೮೮೫ ರಲ್ಲಿ ಸ್ಥಾಪಿತವಾದಂದಿನಿಂದ ಬೇರೆ ಬೇರೆ ಪಕ್ಷಗಳು ಹೇಗೆ ಅಸ್ತಿತ್ವದಲ್ಲಿ ಬಂದವು. ಅವುಗಳ ಧ್ಯೇಯ ಧೋರಣಗಳೇನು ಮತ್ತು ಅವುಗಳ ಮುಂದಿನ ಗುರಿಯೇನು ಎಂಬದನ್ನು ಸ್ವಲ್ಪದರಲ್ಲಿ ಈ ಪುಟ್ಟ ಪುಸ್ತಕದಲ್ಲಿ ವಿವರಿಸಿದ್ದಾರೆ. ಹಿಂದುಸ್ತಾನವೀಗ ಸ್ವತಂತ್ರವಾಗಿದ್ದರಿಂದ ಸ್ವಾತಂತ್ರ್ಯ ಧ್ಯೇಯವನ್ನಿಟ್ಟುಕೊಂಡು ಈ ಪಕ್ಷಗಳೆಲ್ಲ ತಮ್ಮ ಧ್ಯೇಯ ಧೋರಣಗಳಲ್ಲಿ ಬದಲಾವಣೆ ಮಾಡಿಕೊಳ್ಳತಕ್ಕದ್ದು ಕ್ರಮಪ್ರಾಪ್ತವಾಗಿದೆ. ಪ್ರಸ್ತುತ ಈ ವಿಷಯವನ್ನು ಚರ್ಚಿಸಿ ಇನ್ನು ಮುಂದೆಯೂ ಈ ಪಕ್ಷಗಳು ಕಾರ್ಯಮಾಡುವ ಅವಶ್ಯಕತೆಯನ್ನು ಪ್ರತಿಪಾದಿಸಿದ್ದಾರೆ.

## Australia & Newzealand

By T. K. Critchley Oxford University Pamphalets on Indian Affairs No. 40 Price Annas 6 Only.

ಆಸ್ಟ್ರೇಲಿಯದಲ್ಲಿ ವಿವಿಧ ಸಲಹೆಗಾರ ಸ್ಥಳಗಳಲ್ಲಿ ಕೆಲಸ ಮಾಡಿ ಅನುಭವ ಪಡೆದ ಪ್ರಸ್ತುತ ಲೇಖಕರು ಆಸ್ಟ್ರೇಲಿಯದ ಆರ್ಥಿಕ ಮತ್ತು ರಾಜಕೀಯ ಪರಿಸ್ಥಿತಿಯನ್ನು ಈ ಚಿಕ್ಕ ಪುಸ್ತಕದಲ್ಲಿ ವಿವರಿಸಿದ್ದಾರೆ. ಹಿಂದುಸ್ತಾನ ಮತ್ತು ಆಸ್ಟ್ರೇಲಿಯದ ಸಂಬಂಧ ದಿನದಿನಕ್ಕೆ ಹೆಚ್ಚೆಚ್ಚು ಬೆಳೆಯುತ್ತಿರುವದರಿಂದ ಆ ದೇಶದ ಬಗ್ಗೆ ತಿಳಿದುಕೊಳ್ಳುವದು ಅವಶ್ಯವಾಗಿದೆ. ಈ ಸಮಯದಲ್ಲಿ ಇಂಥ ಪುಟ್ಟಪುಸ್ತಕವನ್ನು ಪ್ರಸಿದ್ಧಿಸಿದ್ದು ಉಪಯುಕ್ತವಾಗಿದೆ. ಇದೇ ಪುಸ್ತಕದಲ್ಲಿ ಹೊಸದಾಗಿ ಪ್ರಗತಿ ಪಡೆಯಲಿರುವ ನ್ಯೂಝಿಲಂಡ ದ್ವೀಪಗಳ ಬಗ್ಗೆಯೂ ವಿವರಿಸಲಾಗಿದೆ. ಇವೆರಡೂ ದೇಶಗಳ ಭವಿಷ್ಯತ್ತು ಉಜ್ವಲವಾಗಿದ್ದು ಸ್ವತಂತ್ರ ಹಿಂದುಸ್ತಾನದ ಗೂಡ ಈ ರಾಷ್ಟ್ರಗಳು ಈ ಬಗೆಯ ಸ್ನೇಹಸಂಬಂಧವಿಟ್ಟುಕೊಳ್ಳಲಿ.

## ತತ್ತ್ವಮಸಿ

ದೆಮಿ ಅಷ್ಟಪತ್ರ ೫೨ ಪುಟಗಳು ಬೆಲೆ ೦—೧೦—೦.

## ತತ್ವಮಸಿ ವಿಮರ್ಶೆ

ದೆಮಿ ಅಷ್ಟಪತ್ರದ ೯೪ ಪುಟಗಳು ಬೆಲೆ ೧—೪—೦ ಲೇಖಕರು. ಪಂಡಿತ ಚೀಮನಹಳ್ಳಿ ರಘುನಾಥಾಚಾರ್ಯರು. ೩೩ ಹಯವದನ ಸದನ ೬ ನೇ ಬೀದಿ ಚಾಮರಾಜಪೇಟೆ ಬೆಂಗಳೂರು.ನಗರ.

ಛಾಂದೋಗ್ಯೋಪನಿಷತ್ತಿನ ಆರನೆಯ ಅಧ್ಯಾಯದಲ್ಲಿ ಬಂದ ಈ ತತ್ವಮಸಿ ಮಹಾವಾಕ್ಯವು ತತ್ತ್ವಜಿಜ್ಞಾಸುಗಳಿಗೆಲ್ಲ ಅತಿ ಮಹತ್ವದ ವಾಕ್ಯವು. ದ್ವೈತಿಗಳು ಇದು ಜೀವೇಶ್ವರ ಭೇದವನ್ನು ಪ್ರತಿಪಾದಿಸುವದೆಂದು ಹೇಳಿದರೆ ಅದ್ವೈತಿಗಳು ಇದು ಅಭೇದಪರವಾಗಿದೆಂದು ಪ್ರತಿಪಾದಿಸುವದುಂಟು. ಪಂಡಿತ ರಘುನಾಥಾಚಾರ್ಯರು. ಮೊದಲನೆಯ ಪುಸ್ತಕದಲ್ಲಿ ಈ ಉಪನಿಷತ್ತಿನ ಆರನೇ ಅಧ್ಯಾಯದ ಖಂಡಾರ್ಥವನ್ನು ದ್ವೈತ ಸಿದ್ಧಾಂತಾನುಸಾರವಾಗಿ ಕನ್ನಡದಲ್ಲಿ ಪ್ರತಿಪಾದಿಸಿದ್ದಾರೆ.

ಎರಡನೆಯ ಪುಸ್ತಕದಲ್ಲಿ ಈ ಮಹಾವಾಕ್ಯವು ಭೇದಪರವೇ ಹೇಗೆ ಆಗಿದೆಂಬದನ್ನು ಅನೇಕ ಶ್ರುತಿ ಸ್ಮೃತಿಗಳಲ್ಲಿಯ ವಾಕ್ಯಗಳಿಂದ ಸಿದ್ಧಮಾಡಿ ತೋರಿಸಿರುವರು. ಯಾವುದೊಂದು ವಾಕ್ಯದ ಅರ್ಥವನ್ನು ನಿರ್ಣಯಿಸಬೇಕಾದರೆ ಅದರ ಪೂರ್ವಾಪರ ಸಂಬಂಧವನ್ನು ವಿಚಾರ ಮಾಡಬೇಕಾಗುವದಲ್ಲದೆ ಅದೇ ಗ್ರಂಥಕರ್ತನು ಬೇರೆ ಗ್ರಂಥಗಳಲ್ಲಿ ಅದೇ ವಿಷಯವನ್ನು ಯಾವ ರೀತಿಯಾಗಿ ಪ್ರತಿಪಾದಿಸಿದ್ದಾನೆಂಬುದನ್ನು ನೋಡಬೇಕಾಗುವದು. ಯಾವದೊಂದು ವಾಕ್ಯಕ್ಕೆ ಆಪಾತತಃ ತೋರುವ ಅರ್ಥವನ್ನು ಗ್ರಹಿಸುವದು ಸರಿಯಲ್ಲ ಆಧುನಿಕ ಪಂಡಿತರು ಈ ಬಗೆಯ ಅರ್ಥವನ್ನು ಗ್ರಹಿಸುತ್ತಿರುವದು ಕಂಡು ಬರುತ್ತದೆ. ಆದರೆ ಪಂಡಿತ ರಘುನಾಥಾಚಾರರ್ಯ ಜೀವೇಶ್ವರ ಸಂಬಂಧವನ್ನು ಪ್ರತಿಪಾದಿಸುವ ಅನೇಕ ಗ್ರಂಥಗಳನ್ನು ಅಭ್ಯಸಿಸಿ ಅದರೊಳಗಿನ ವಾಕ್ಯಗಳನ್ನೆಲ್ಲ ಸಂಗ್ರಹಿಸಿ ತತ್ತ್ವಮಸಿ ವಾಕ್ಯ ಭೇದಪರವಾಗಿಯೆ ಆಗಿದೆಂಬದನ್ನು ಸಿದ್ಧಮಾಡಿ ತೋರಿಸಿರುವರು. ಸುಲಭವಾದ ಕನ್ನಡದಲ್ಲಿ ಈ ವಿಷಯವನ್ನು ಪ್ರತಿಪಾದಿಸಿದ್ದರಿಂದ ಸಂಸ್ಕೃತ ಬಾರದಿದ್ದವರಿಗೆ ಕೂಡ ಉಪಯುಕ್ತವಾಗಿದೆ. ಕನ್ನಡಿಗರು ಈ ಪುಸ್ತಕಗಳನ್ನು ಓದಿ ವೇದಾಂತದ ತಿರುಳನ್ನು ತಿಳಿದುಕೊಂಡು ಅದರಂತೆ ಆಚರಿಸಿ ಶ್ರೇಯೋಭಾಗಿಗಳಾಗಬೇಕು.

## ತತ್ವರತ್ನಪ್ರಕಾಶ [ಮೊದಲನೆಯ ಭಾಗ]

ಪರಮ ಪುರುಷಾರ್ಥ ವಿಚಾರ ಲೇ. ಚೀಮನಹಳ್ಳಿ ರಾಘನಾಚಾರ್ಯರು ಡೆಮಿ ಅಷ್ಟಪತ್ರದ ೬೩ ಪುಟಗಳು.ಬೆಲೆ ಹತ್ತಾಣೆ

ಮೋಕ್ಷವೇ ಮಾನವನ ಪರಮ ಪುರುಷಾರ್ಥವು. ಜೀವಿಸಿದ ಮನುಷ್ಯರೆಲ್ಲ ಜನನ ಮರಣ ರಹಿತವಾದ ಪರಮಾತ್ಮನ ಸಾನ್ನಿಧ್ಯವನ್ನು ಪಡೆಯಬೇಕೆಂಬ ಹಿರಿಯಾಸೆಯುಳ್ಳವರಾಗಿರುವದು ಸ್ವಾಭಾವಿಕ. ಆದರೆ ಆ ಪರಮ ಪುರುಷಾರ್ಥವನ್ನು ಪಡೆಯುವ ಬಗೆಹೇಗೆಂಬದನ್ನು ತಿಳಿಯದ್ದೆ ಅನೇಕರು ಬಳಲುವುದುಂಟು. ಈ ಪರಮಪುರುಷಾರ್ಥ ವಿಚಾರವನ್ನು ಈ ಗ್ರಂಥದಲ್ಲಿ ಅನೇಕ ಶ್ರುತಿ ಸ್ಮೃತಿಗಳ ಆಧಾರದಿಂದ ಆಚಾರ್ಯರು ಸಂಗ್ರಹಿಸಿದ್ದಾರೆ. ಸಂಸ್ಕೃತದಲ್ಲಿರುವ ಆ ಶ್ಲೋಕಗಳನ್ನೆಲ್ಲ ಕನ್ನಡದಲ್ಲಿ ಅನುವಾದಿಸಿದ್ದಾರೆ. ಮೋಕ್ಷಾಪೇಕ್ಷಿಗಳಾದವರೆಲ್ಲ ಈ ಸಾಧನ ಮಾರ್ಗವನ್ನು ತಿಳಿದುಕೊಂಡು ಅದರಂತೆ ಆಚರಿಸಿ ಪರಮಪುರುಷಾರ್ಥಕ್ಕೆ ಪಾತ್ರರಾದರೆ ಆಚಾರ್ಯರು ಪಟ್ಟ ಶ್ರಮದ ಸಾರ್ಥಕವಾಗುವದು. —೧೬ ನೇ ಪುಟಕ್ಕೆ

## ಸಾದರ ಸ್ವೀಕಾರ

### ಇಂಗ್ಲೀಷು

1 Freedom's Battle 1942-45 (I.N.A. In Action)
Illustrated and compiled By Vithalbhai K. Jhaveri Sital Mahal. Walkeshwar Bombay. Price Rs. 12-8-0

### ಕನ್ನಡ

೨ ಅತಿಮಾನವ
ಲೇಖಕರು— ದ. ಲ. ಕೆರೂರ
ಪ್ರಕಾಶಕರು— ಸಂಜೀವಿನಿ ಪ್ರಕಾಶನ ಹುಬ್ಬಳ್ಳಿ
ಪುಟಗಳು ೧೬೦ ಬೆಲೆ ೨—೦—೦

೩ ಶ್ರೀ ಪ್ರಲ್ಹಾದ ಸುಗುಣಸುಮ ವಿಕಾಸ
ಲೇಖಕರು— ಜಿ. ಎಸ್ ನರಸಿಂಹಮೂರ್ತಾಚಾರ
ಪ್ರಕಾಶಕರು— ಶ್ರೀ ಚಂದ್ರಿಕಾ ಸದನ ೩೬೫. ಟಿ. ನರಸೀಪುರ ( ಮೈಸೂರು ಜಿಲ್ಲಾ )
ಪುಟಗಳು ೯೦ ಬೆಲೆ ೦—೧೨—೦

೪ ನಾಲ್ಕನೆಯ ಮನೆ
ಲೇಖಕರು— ಎಂ. ನರೇಂದ್ರಬಾಬು
ಪ್ರಕಾಶಕರು— ಉಷಾ ಸಾಹಿತ್ಯ ಮಾಲೆ
ಪುಟಗಳು ೧೭೦ ಬೆಲೆ ೨—೦—೦

೫ ಸಮಾಜ
ಕನ್ನಡ ಮಾಸಿಕ ( ಸ್ವಾತಂತ್ರ್ಯೋತ್ಸವ ಸಂಚಿಕೆ )
ಪ್ರಕಾಶಕರು— ಭಾಲಚಂದ್ರ ವೆಂ. ಘಾಟೀಕರ ಸಮಾಜ ಕಾರ್ಯಾಲಯ ಧಾರವಾಡ.
ಪುಟಗಳು— ೩೬. ಬೆಲೆ ೩ ಆಣೆ

೬ ವಿಚಾರ
( ಕನ್ನಡ ವಾರಪತ್ರಿಕೆ )
ಸಂಪಾದಕರು— ಇಟಗಿ ವೇದಮೂರ್ತಿ ದಾವಣಗೇರಿ
ಪುಟಗಳು— ೧೨ ಬೆಲೆ ೨ ಆಣೆ

೭ ವರದಿಗಳು
೧. ಕರ್ನಾಟಕ ಸೇವಾಸಂಘ ಮದರಾಸದ ದ್ವಿತೀಯ ವಾರ್ಷಿಕ ವರದಿ— ೧೯೪೬—೪೭
೨. ಮೊಗವೀರ ಯುವಕ ಸಂಘ, ಮುಂಬೈಯವರ ಹನ್ನೆರಡನೇ ವಾರ್ಷಿಕ ವರದಿ ೧೯೪೬
ತಮ್ಮ ಸಂಘದ ವಿವಿಧ ವಿಷಯಗಳ ವಿವರಗಳನ್ನು ಅಂಕಿಸಂಖ್ಯೆಗಳಿಂದ ಜನತೆಗೆ ವಿಶದವಾಗಿ ತಿಳಿಯುವಂತೆ ಚಿತ್ರಿಸಿದ್ದಾರೆ.

# ಸಂಪಾದಕೀಯ ಟೀಕೆಟಿಪ್ಪಣಿಗಳು

## ಪೂರ್ವ-ಪಶ್ಚಿಮ ಪಂಜಾಬ ಪರಿಸ್ಥಿತಿ

ಪಾಕಿಸ್ತಾನ ಮತ್ತು ಹಿಂದುಸ್ತಾನ ಎಂಬ ಎರಡು ಭಾಗಗಳಾಗಿ ಮುಸಲ್ಮಾನರಿಗೆ ಪ್ರತ್ಯೇಕ ಪ್ರಾಂತ ಸಿಕ್ಕಿದ್ದರೂ ದೇಶದಲ್ಲಿ ದಂಗೆಗಳೇನು ಕಡಿಮೆಯಾಗಲೊಲ್ಲವು. ಪೂರ್ವ—ಪಶ್ಚಿಮ ಪಂಜಾಬ ಪ್ರಾಂತಗಳಲ್ಲಿ ಮತ್ತು ಪೂರ್ವ ಬಂಗಾಲದ ಸಿಲ್ಹಟ ಜಿಲ್ಹೆಯಲ್ಲಿ ಭೀಕರ ದೊಂಬಿಗಳು ನಡೆದು ವಿತ್ತ ಜೀವಿತಗಳಿಗೆ ಅಪಾರ ಹಾನಿಯಾದ ಸುದ್ದಿ ಪ್ರಸಿದ್ಧವಾಗಿದೆ. ಸಿಲ್ಹಟ ಜಿಲ್ಹೆಯಲ್ಲಿ ದೊಂಬಿಯ ಸಂಬಂಧದಲ್ಲಿ ಮಹಾತ್ಮಾ ಗಾಂಧಿಯವರು ತಮ್ಮ ಪ್ರಾರ್ಥನೋತ್ತರ ಭಾಷಣದಲ್ಲಿ ಉಲ್ಲೇಖಿಸಿ ದೊಂಬಿಯನ್ನು ತೀವ್ರ ನಿಲ್ಲಿಸಬೇಕು ಮತ್ತು ಸುಂದರ ಯೋಗ್ಯ ಸಮಾಚಾರ ತೆಗೆದುಕೊಳ್ಳಬೇಕೆಂದು ಅಭಿಪ್ರಾಯಪಟ್ಟಿರುವರು. ಪೂರ್ವ ಪಂಜಾಬ, ಪಶ್ಚಿಮ ಪಂಜಾಬಗಳಲ್ಲಿನ ಪರಿಸ್ಥಿತಿ ಇದಕ್ಕೂ ಭೀಕರವಾಗಿತ್ತು. ಕೇಂದ್ರ ಸರಕಾರಗಳ ಮುಖ್ಯ ಮಂತ್ರಿಗಳು ಮತ್ತು ಇತರ ಮಂತ್ರಿಗಳು ದೊಂಬಿಯ ಪ್ರದೇಶಗಳಿಗೆ ಭೆಟ್ಟಿಕೊಟ್ಟು ಪರಿಸ್ಥಿತಿಯನ್ನು ಪ್ರತ್ಯಕ್ಷ ನೋಡಿಕೊಂಡು ಬಂದಿರುವರು. ಉಗ್ರೋಪಾಯಗಳನ್ನು ಕೈಕೊಳ್ಳಲಾಗುವುದೆಂದು ಸಂಯುಕ್ತ ಪ್ರಕಟನೆ ಹೊರಡಿತು. ಆದರೂ ಪರಿಸ್ಥಿತಿಯನ್ನೂ ಪೂರ್ಣ ಶಾಂತವಾಗಿಲ್ಲ. ಗಡಿನಿರ್ಣಯಕ ಸಮಿತಿಯವರ ನಿರ್ಣಯ ಯಾವ ಪಕ್ಷಕ್ಕೂ ಸಮಾಧಾನವನ್ನುಂಟು ಮಾಡಿಲ್ಲಾದ್ದರಿಂದ ಕೆಲ ಭಾಗಗಳಲ್ಲಿ ದೊಂಬಿ ಎದ್ದಿದೆಂದು ಹೇಳಬಹುದು. ಆದರೆ ಈ ಪ್ರಕಾರ ದೊಂಬಿಯನ್ನೆಬ್ಬಿಸುವದು ಯಾವ ರೀತಿಯಿಂದಲೂ ನ್ಯಾಯ್ಯವಲ್ಲ. ಗಡಿ ನಿರ್ಣಾಯಕ ಸಮಿತಿಯ ನಿರ್ಣಯವು ಎರಡೂ ಪಕ್ಷಗಳಿಗೂ ವಿಧೇಯವಾಗಿದ್ದು ಅದನ್ನು ಒಪ್ಪಲೇಬೇಕಾದುದು ಕರ್ತವ್ಯವಾಗಿದೆ.

## ಪ್ರತಿಕ್ರಿಯೆ

ಇನ್ನು ಈ ದೊಂಬಿಯ ಸಂಬಂಧದಲ್ಲಿ ಪಾಕಿಸ್ತಾನ ಮತ್ತು ಹಿಂದುಸ್ತಾನ ಸರಕಾರಗಳ ಗವರ್ನರ ಜನರಲ್ ಮತ್ತು ಮುಖ್ಯ ಮಂತ್ರಿಗಳು ಹೊರಡಿಸಿದ ಪ್ರಕಟನೆಗಳನ್ನು ನೋಡಿದರೆ ಅಲ್ಲಿ ನಡೆದುದರ ವಸ್ತುಸ್ಥಿತಿ ಚೆನ್ನಾಗಿ ಗೊತ್ತಾಗುವದಿಲ್ಲ. ಪೂರ್ವ ಪಂಜಾಬದಲ್ಲಿ ಮುಸಲ್ಮಾನರಿಗೆ ವಿಪರೀತ ಹಾನಿಯಾಗಿದ್ದು ಅದರ ಪ್ರತೀಕಾರ ತೆಗೆದುಕೊಳ್ಳಬೇಡಿರೆಂದು ಜಿನ್ನಾ ಸಾಹೇಬರು ಪಾಕಿಸ್ತಾನದಲ್ಲಿಯ ಮುಸಲ್ಮಾನರಿಗೆ ಉಪದೇಶಿಸಿದ್ದರೆ, ಪಶ್ಚಿಮ ಪಂಜಾಬದಲ್ಲಿ ಅಲ್ಪ ಸಂಖ್ಯಾಕರಿಗೆ ಆದ ವಿಪರೀತ ಹಾನಿಯ ಪ್ರತಿಕ್ರಿಯೆ ಪೂರ್ವ ಪಂಜಾಬದಲ್ಲಿ ಆಗದಿರಲೆಂದು ಪಂಡಿತ ಜವಾಹರಲಾಲರು ಕೇಳಿಕೊಂಡಿದ್ದಾರೆ. ಇಂಥ ಪರಿಸ್ಥಿತಿಯಲ್ಲಿ ಈ ರೀತಿ ಪರಸ್ಪರ ವಿರುದ್ಧ ಪ್ರಕಟನೆಗಳು ಹೊರಡುವದರಿಂದ ಜನತೆ ದಿಙ್ಮೂಢವಾಗಿ ಅಶಾಂತಿಗೀಡಾಗುವ ಸಂಭವವಿದೆ. ಆದುದರಿಂದ ಸಂಯುಕ್ತ ಪ್ರಕಟನೆಗಳನ್ನೆ ಕೆಲ ಸಮಯದ ವರೆಗಾದರೂ ಹೊರಡಿಸುವದು ಉಚಿತವಾಗಿದೆ. ಎಷ್ಟು ಬೇಗ ಈ ದೊಂಬಿಗಳಿಗೆ ನಿಯಂತ್ರಣ ಹಾಕಲಾಗುವದೊ ಅಷ್ಟು ಹಿತಕರವೇ ಆಗಿದೆ. ಈ ಸಂಬಂಧದಲ್ಲಿ ಯಾವದೇ ಬಗೆಯ ಶೈಥಿಲ್ಯವನ್ನು ತೋರದೆ ತಪ್ಪಿತಸ್ಥರನ್ನೆಲ್ಲ ದಂಡಿಸುವದು ಅತ್ಯವಶ್ಯವಾಗಿದೆ. ಯಾವದೇ ಕಾರಣದಿಂದ ಪಂಜಾಬದ ವಾತಾವರಣವು ಅಶಾಂತವುಳಿದರೆ ಅದರ ಪ್ರತಿಕ್ರಿಯೆ ಉಳಿದ ಪ್ರಾಂತಗಳ ಮೇಲೆ ಆಗುವ ಸಂಭವವೂ ಉಂಟು. ಈ ಮಾತನ್ನು ಚೆನ್ನಾಗಿ ನೆನೆದು ಆಯಾ ಪ್ರಾಂತಗಳ ಮಂತ್ರಿಗಳು ದೊಂಬಿಗಳನ್ನು ತಡೆಯಲು ಉಗ್ರ ಉಪಾಯಗಳನ್ನು ಕೈಕೊಳ್ಳಬೇಕಾಗಿದೆ. ಅಲ್ಲದೆ ಈ ದೊಂಬಿಯ ನೆವದಿಂದ ಎರಡೂ ರಾಷ್ಟ್ರಗಳಲ್ಲಿ ವೈರಭಾವ ಉತ್ಪನ್ನವಾದರೆ ಇಡೀ ದೇಶಕ್ಕೆ ಹಾನಿಕಾರಕವಾಗುವದು. ಆದುದರಿಂದ ಈ ದೊಂಬಿಗಳನ್ನು ಅಲ್ಲಲ್ಲಿಯೆ ಹತ್ತಿಕ್ಕಬೇಕಲ್ಲದೆ ಅವುಗಳ ಪ್ರತಿಕ್ರಿಯೆ ಸರಕಾರಗಳ ಮೇಲೆ ಇಲ್ಲವೆ ಜನತೆಯ ಮೇಲೆ ಆಗದಂತೆ ನೋಡಿಕೊಳ್ಳುವುದು ಆಯಾ ಸಾಮಂತ ಸರಕಾರಗಳ ಕರ್ತವ್ಯವಾಗಿದೆ. ಹಿಂದೆ ಆದದ್ದು ಆಗಿ ಹೋಯಿತು, ಇನ್ನು ಮೇಲಾದರೂ ಅಂಥ ದೊಂಬಿಗಳು ನಡೆಯದಂತೆ ನೋಡಿಕೊಳ್ಳಬೇಕು.

## ಅನ್ಯಾಯದ ಪರಮಾವಧಿ

ಸರಹದ್ದ ಪ್ರಾಂತದ ಗವರ್ನರರಾದ ಸರ್ ಜಾನ್ ಕನಿಂಗಹ್ಯಾಮರು ಅಧಿಕಾರ ಸ್ವೀಕರಿಸಿದ ೮—೧೦ ದಿನಗಳಲ್ಲಿಯೆ ತಮ್ಮ ಪ್ರತಿಗಾಮಿ ನಿರಂಕುಶಾಡಳಿತವನ್ನು ಪ್ರಾರಂಭಿಸಿರುವರೆಂದು ಕಾಣುತ್ತದೆ. ಶಾಸನ ಸಭೆಯ ವಿಶ್ವಾಸಕ್ಕೆ ಪಾತ್ರವಾಗಿದ್ದ ಖಾನ ಮಂತ್ರಿಮಂಡಳವನ್ನು ಕಿತ್ತುಹಾಕಿ ಅಲ್ಪಸಂಖ್ಯಾಕ ಪಕ್ಷದ ಅಬ್ದುಲ್ ಕೈಯಾಮಖಾನರ ಮಂತ್ರಿಮಂಡಳವನ್ನು ರಚಿಸಿಕೊಂಡಿದ್ದಾರೆ. ಪಾಕಿಸ್ತಾನ ಸರಕಾರವ ಘಟನೆಯಲ್ಲಿ ಆ ಬಗ್ಗೆ ಅಧಿಕಾರ ಪಡೆವ ತಿದ್ದುಪಡಿಯನ್ನು ಮಾಡಿಸಿಕೊಂಡು ಗವರ್ನರರು ಈ ಕ್ರಮವನ್ನು ಕೈಕೊಂಡಿದ್ದರೂ ಅದು ಯಾವ ರೀತಿಯಿಂದಲೂ ನ್ಯಾಯ್ಯವಾಗಲಾರದು. ಸದ್ಯದ ಶಾಸನ ಸಭೆಯಲ್ಲಿ ಯಾವ ಪಕ್ಷಕ್ಕೆ ಬಹುಮತವಿರುವದೋ ಅದೇ ಪಕ್ಷದವರ ಕೈಯಲ್ಲಿ ಅಧಿಕಾರವಿರತಕ್ಕದ್ದು ಶಾಸನ ಸಮ್ಮತವು. ಅದನ್ನು ಬಿಟ್ಟು ವಿರೋಧ ಪಕ್ಷದ ಅರ್ಥಾತ್ ಅಲ್ಪಸಂಖ್ಯಾತ ಪಕ್ಷದ ಪ್ರತಿನಿಧಿಗಳು ಮಂತ್ರಿಮಂಡಳವನ್ನು ರಚಿಸುವದು ಹೊಸ ತಿದ್ದುಪಡಿಯಿಂದ ಕಾಯದೆಬದ್ಧವಾಗಿದ್ದರೂ ನ್ಯಾಯ್ಯವಾಗಲಾರದು. ಒಂದು ವೇಳೆ ಲೀಗಿನ ಮಂತ್ರಿಮಂಡಳವನ್ನೆ ರಚಿಸಬೇಕಾಗಿದ್ದರೆ ಶಾಸನ ಸಭೆಯ ಬೆಂಬಲವನ್ನು ಪಡೆಯಬೇಕಿತ್ತು. ಅದು ಶಕ್ಯವಿಲ್ಲದಿದ್ದರೆ ಸದ್ಯದ ಶಾಸನ ಸಭೆಯನ್ನೆ ವಿಸರ್ಜಿಸಿ ಹೊಸ ಚುನಾವಣೆಗಳನ್ನು ನಡೆಸಬೇಕಿದ್ದಿತು. ಚುನಾವಣೆಗಳಲ್ಲಿ ಯಾವ ಪಕ್ಷಕ್ಕೆ ಬಹುಮತ ದೊರೆಯುವದೊ ಆ ಪಕ್ಷದ ಮಂತ್ರಿಮಂಡಳವನ್ನು ರಚಿಸಿಕೊಳ್ಳಬಹುದಾಗಿತ್ತು. ಈ ಯಾವ ಶಾಸನಸಮ್ಮತ ಮಾರ್ಗವನ್ನೂ ಅನುಸರಿಸದೆ ಅಧಿಕಾರ ಬಲವನ್ನು ಪ್ರಯೋಗಿಸಿ ಮಂತ್ರಿಮಂಡಳವನ್ನು ರದ್ದುಗೊಳಿಸಿದ್ದು ಅನ್ಯಾಯದ ಪರಮಾವಧಿ. ಹೊಸದಾಗಿ ಮುಖ್ಯ ಮಂತ್ರಿತ್ವವನ್ನು ವಹಿಸಿಕೊಂಡಿರುವ ಅಬ್ದುಲ್ ಕಯಾಮಖಾನರು ತಮ್ಮ ಧೋರಣವನ್ನು ಸ್ಪಷ್ಟೀಕರಿಸುತ್ತ ಹೊರಡಿಸಿದ ಪ್ರಕಟನೆಯಲ್ಲಿ ಕೆಲ ಮಾತುಗಳನ್ನು ಹೇಳಿದ್ದಾರೆ. ಸಾರ್ವತ್ರಿಕ ಚುನಾವಣೆಗೆ ಅವರೀಗ ಸಿದ್ಧರಿಲ್ಲೆಂದು ಸ್ಪಷ್ಟವಿದೆ. ಸದ್ಯದ ಶಾಸನ ಸಭೆಯು ಜನತೆಯ ಹೃದ್ಗತವನ್ನು ನಿದರ್ಶಿಸುವದಿಲ್ಲ. ಅಲ್ಪಸಂಖ್ಯಾಕರಿಗೆ ಅನವಶ್ಯಕವಾಗಿ ಪ್ರಾಶಸ್ತ್ಯವನ್ನು ಕೊಟ್ಟದ್ದರಿಂದ ರಾಜಕೀಯ ಪರಿಸ್ಥಿತಿಯು ಸ್ಥಿತ್ಯಂತರಗೊಂಡಿದೆಂದು ಹೇಳಿ ಹೊಸ ಘಟನೆ ಸಿದ್ಧವಾಗುವವರೆಗೆ ತಾವೇ ಅಧಿಕಾರದಲ್ಲುಳಿಯುವದಾಗಿ ಅಭಿಪ್ರಾಯಪಟ್ಟಿದ್ದಾರೆ. ಇಷ್ಟು ದಿನಗಳವರೆಗೆ ಈ ಮಾತು ಎಲ್ಲಿ ಹೋಗಿತ್ತು! ಸಾರ್ವತ್ರಿಕ ಮತದಾನದಲ್ಲಿ ಕಾಂಗ್ರೆಸ್ಸು ಭಾಗ ವಹಿಸದೆ ಇದ್ದುದರಿಂದ ಇಡೀ ಪ್ರಾಂತದ ಜನತೆಯ ಹೃದ್ಗತವು ಅದರಲ್ಲಿ ವ್ಯಕ್ತವಾಗಿಲ್ಲ. ಆದುದರಿಂದ ಲೀಗಿನವರಿಗೆ ನಿಜವಾಗಿ ಬಹುಮತವಿದೆಂದು ಮನವರಿಕೆಯಾಗಿದ್ದರೆ ಅವರು ಕೂಡಲೆ ಶಾಸನ ಸಭೆಯನ್ನು ಸೇರಿಸಿ ಅದನ್ನು ಸಿದ್ಧಮಾಡಿ ತೋರಿಸಬೇಕು. ಹೊಸ ಘಟನೆಯಲ್ಲಿ ತಮಗೆ ಸರಿದೋರುವಂತೆ ಮತಾಧಿಕಾರವನ್ನು ಮಾಡಿಕೊಂಡು ಚುನಾವಣೆ ನಡೆಸುವದರಲ್ಲಿ ಯಾವ ಪುರುಷಾರ್ಥವಿದೆ? ಪಾಕಿಸ್ತಾನದಲ್ಲಿ ಅಲ್ಪಸಂಖ್ಯಾಕರಿಗೆಲ್ಲ ಸಮಾನ ಹಕ್ಕು ಬಾಧ್ಯತೆ ಕೊಡಲಾಗುವುದೆಂದು ಗವರ್ನರ ಜನರಲ್ ಜಿನ್ನಾಸಾಹೇಬರು ಮತ್ತು ಮುಖ್ಯಮಂತ್ರಿ ಲಿಯಾಕತ ಅಲ್ಲಿಖಾನರು ಹೇಳಿರುವರು. ಆದರೆ ಸರಹದ್ದದಲ್ಲಿಯ ಅವರ ಆಡಳಿತವನ್ನು ನೋಡಿದರೆ ಈ ಆಶ್ವಾಸನವೆಲ್ಲ ಹೊಳ್ಳುಹೊಳ್ಳೆಂದು ಸ್ಪಷ್ಟವಾಗದಿರದು.

## ಯೋಗ್ಯ ಮಾರ್ಗದರ್ಶನ

ಬ್ರಿಟಿಶರು ತಮ್ಮ ದೇಶದಲ್ಲಿ ಉಂಟಾದ ಸದ್ಯದ ಆರ್ಥಿಕ ದುಃಸ್ಥಿತಿಯನ್ನು ದೂರ ಮಾಡಿಕೊಳ್ಳಲು ಯಾವ ಯಾವ ಉಪಾಯಗಳನ್ನು ಯೋಜಿಸುತ್ತಿರುವರೆಂಬದು ಪ್ರಸಿದ್ಧವಾಗಿದೆ. ಉತ್ಪಾದನೆಯನ್ನು ಹೆಚ್ಚಿಸಿಕೊಂಡು ತಾವು ಸ್ವತಃ ಸ್ವಾವಲಂಬಿಗಳಾಗುವದಲ್ಲದೆ ಪರದೇಶಗಳಿಗೆ ಕಳಿಸತಕ್ಕ ಪದಾರ್ಥಗಳನ್ನೂ ಉತ್ಪಾದಿಸಿ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಿಕೊಳ್ಳಲಣಿಯಾಗಿದ್ದಾರೆ. 'ಚೈನೀ ವಸ್ತುಗಳನ್ನೆಲ್ಲ ಬಿಟ್ಟುಗೊಟ್ಟು ಅತ್ಯಂತ ಸಾದಾ ರೀತಿಯಿಂದ ಜೀವನ ಸಾಗಿಸಹತ್ತಿದ್ದಾರೆ. ಇದೀಗ ಇಂಗ್ಲಂಡಿಗೆ ಹೋಗಿ ಬಂದ ಡಾ. ಕುಮಾರಪ್ಪನವರು ಪ್ರಸಿದ್ಧಿಸಿದ ಹೇಳಿಕೆಯನ್ನು ನೋಡಿದರೆ ಸದ್ಯದ ಬ್ರಿಟಿಶರ ಜೀವನವೆಷ್ಟು ಸಾದಾ ಮತ್ತು ನಿರಾಡಂಬರದ್ದಾಗಿದೆಂಬುದು ಗೊತ್ತಾಗುವದು. 'ಇಂಗ್ಲಿಷರು ತಮ್ಮ ಬಟ್ಟೆಯ ಅವಶ್ಯಕತೆಯನ್ನು ಬಹಳ ಕಡಿಮೆ ಮಾಡಿರುವರು. ಅನೇಕ ಜನರು ಕೇವಲ ಸ್ನಾನದ ಪಂಜೆಯಲ್ಲಿಯೆ ಕಾಲ ಕಳೆಯುವರು. ಶರ್ಟು ಸ್ಟಾಕಿಂಗ್ಸ ಮುಂತಾದ್ದನ್ನು ಕೂಡ ಹಾಕಿಕೊಳ್ಳುವುದಿಲ್ಲ. ಹೆಚ್ಚು ಆಹಾರ ಪದಾರ್ಥಗಳನ್ನು ಪಡೆಯುವದಕ್ಕಾಗಿ ಅವರು ತಮ್ಮ ಬಟ್ಟೆಯ ಪೂರೈಕೆಗಳನ್ನು ಕಡಿಮೆ ಮಾಡಿಕೊಂಡು ಪರದೇಶಗಳಿಗೆ ಬಟ್ಟೆ ಕಳಿಸುತಿರುವರು. ಗಾಂಧೀಜಿಯವರು ಉಪಯೋಗಿಸುತ್ತಿರುವ ಬಟ್ಟೆಗಳು ೧೯೪೭ ರಲ್ಲಿ ಬ್ರಿಟಿಶರು ಉಪಯೋಗಿಸಹತ್ತಿದ ಬಟ್ಟೆಗಳಿಗಿಂತ ಹೆಚ್ಚಾಗಿರುವವೆಂಬದನ್ನು ನೋಡಿ ನನಗೆ ಬಹಳ ಆಶ್ಚರ್ಯವೆನಿಸಿತು' ಎಂದು ಮುಂತಾಗಿ ಕುಮಾರಪ್ಪನವರು ಹೇಳಿರುವರು. ಇದನ್ನು ನೋಡಿದರೆ ರಾಷ್ಟ್ರವು ಆಪತ್ತಿನಲ್ಲಿ ಬಿದ್ದಾಗ ತಮ್ಮ ಬೇಡಿಕೆಗಳನ್ನು ಬ್ರಿಟಿಶರು ಯಾವ ರೀತಿಯಿಂದ ಕಡಿಮೆ ಮಾಡಿಕೊಂಡರೆಂಬುದು ಕಂಡುಬರದಿರದು. ಆಹಾರ ಪದಾರ್ಥಗಳ ಉತ್ಪಾದನೆಯನ್ನು ಹೆಚ್ಚಿಸುವದಕ್ಕಾಗಿಯಂತೂ ಸರಕಾರದವರು ಉಗ್ರ ಉಪಾಯಗಳನ್ನೆ ಕೈಕೊಂಡಿರುವರು. ಒಕ್ಕಲಿಗರು ಇಂತಿಷ್ಟು ಬೆಳೆಯನ್ನು ಬೆಳೆಸಲೇಬೇಕೆಂದು ಸುಗ್ರೀವಾಜ್ಞೆ ಹೊರಟಿದೆ. ಬ್ರಿಟಿಶರ ಈ ಧೋರಣೆಯು ಅನುಕರಣೀಯವಾಗಿದೆ. ಅವರು ತಮ್ಮ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಿಕೊಳ್ಳಲು ಇಷ್ಟೊಂದು ಸ್ವಾರ್ಥತ್ಯಾಗ ಮಾಡುತಿರುವರು. ಭಾರತದ ಪರಿಸ್ಥಿತಿಯೂ ಇದೇ ರೀತಿ ತಂಗಾಲಾಗಿದೆಂಬದು ಎಲ್ಲರ ಅನುಭವಕ್ಕೆ ಬಂದ ಮಾತಾಗಿದೆ. ಈ ಪರಿಸ್ಥಿತಿಯಲ್ಲಿ ಭಾರತೀಯರು ಬ್ರಿಟಿಶರು ಹಾಕಿಕೊಟ್ಟ ಮೇಲ್ಪಂಕ್ತಿಯನ್ನಾದರೂ ಅನುಸರಿಸಿ ಉತ್ಪಾದನೆಯನ್ನು ಹೆಚ್ಚಿಸಿಕೊಳ್ಳುವದು ಕರ್ತವ್ಯವಾಗಿದೆ. ಪಕ್ಷ ಪಂಗಡಗಳ ಒಣ ಪ್ರತಿಷ್ಠೆಗೊಳಗಾಗಿ ಉತ್ಪಾದನೆಗೆ ವ್ಯತ್ಯಯ ಬರುವ ರೀತಿಯಲ್ಲಿ ಯಾರೇ ಆಚರಿಸಿದರೂ ರಾಷ್ಟ್ರದ್ರೋಹ ಮಾಡಿದಂತೆಯೇ ಸೈ. ಭಾರತ ಮತ್ತು ಪ್ರಾಂತೀಯ ಸರಕಾರಗಳು ಈ ಪರಿಸ್ಥಿತಿಯಲ್ಲಿ ಬ್ರಿಟಿಶರ ಮಾರ್ಗದರ್ಶನದ ಲಾಭ ತೆಗೆದುಕೊಳ್ಳಬೇಕೆಂದು ಸೂಚಿಸದಿರೆವು.

## ಸಮಯೋಚಿತ ಸಂದೇಶ

ಮುಂಬೈ ಪೋಲಿಸ ಇನಸ್ಪೆಕ್ಟರ ಜನರಲ್‌ರಾಗಿರುವ ಶ್ರೀ ಕಾಮಟೆಯವರು ಪೋಲೀಸರಿಗೆ ಕೊಟ್ಟ ಸಂದೇಶದಲ್ಲಿ ಕೆಲವು ಮಹತ್ವದ ಮಾತುಗಳನ್ನು ಹೇಳಿದರು. ಪರಕೀಯರ ಆಡಳಿತದ ಕಾಲದಲ್ಲಿ ಪೋಲೀಸರು ಎಷ್ಟೇ ದಬ್ಬಾಳಿಕೆಯನ್ನು ನಡೆಸಿದ್ದರೂ ಸದ್ಯದ ಸ್ವರಾಜ್ಯದಲ್ಲಿ ಅವರು ಜನತಾ ಸೇವಕರೆಂಬುದನ್ನು ಮರೆತರೆ ನಡೆಯದು. ಪೋಲೀಸರು, ಹಿಂದೀಯರು ಚೆನ್ನಾಗಿ ಆಡಳಿತೆಯನ್ನು ಸಾಗಿಸಬಲ್ಲರೆಂಬದನ್ನು ಸಿದ್ಧಮಾಡಿ ಕೊಡಬೇಕೆಂದು ಅವರು ಹೇಳಿರುವರು. ಪೋಲೀಸರು ಸದಾಚಾರಿಗಳು, ಉತ್ತಮ ಸರಕಾರದ ಪುರಸ್ಕರ್ತರು ಆಗಬೇಕೆಂದು ಕಾಮಟೆಯವರು ಹೇಳಿರುವರು. ಸ್ವತಂತ್ರ ರಾಷ್ಟ್ರದಲ್ಲಿ ಪೋಲೀಸರು ಸಾರ್ವಜನಿಕರ ಮಿತ್ರರು ಮತ್ತು ಸೇವಕರು ಆಗಿದ್ದು ಲೋಕಪ್ರಿಯ ಸರಕಾರದ ಸೇವೆಯನ್ನು ಮಾಡುತಿರುವೆವೆಂಬದನ್ನು ಅವರು ಯಾವಾಗಲೂ ಲಕ್ಷ್ಯದಲ್ಲಿಟ್ಟುಕೊಳ್ಳಬೇಕೆಂದು ಅವರು ಹೇಳಿರುವರು. ಪ್ರಾಮಾಣಿಕರೂ ಕಾರ್ಯತತ್ಪರರೂ ರಾಜನಿಷ್ಠರೂ ಆಗಿ ಜನತೆಗೆ ಎಳ್ಳಷ್ಟೂ ಸಂಶಯ ಬಾರದಂತೆ ವರ್ತನವನ್ನಿಟ್ಟುಕೊಳ್ಳಬೇಕೆಂದು ಅವರು ಉಪದೇಶಿಸಿರುವರು. ಇದೇ ತಾನೇ ಸ್ವಾತಂತ್ರ್ಯವನ್ನು ಪಡೆದಿರುವ ಭಾರತದ ಆಡಳಿತದತ್ತ ಇಡೀ ಜಗತ್ತೆ ನೋಡುತಿರುವದು. ಈ ಪರಿಸ್ಥಿತಿಯಲ್ಲಿ ಒಳ್ಳೆ ಆಡಳಿತವನ್ನು ಸಾಗಿಸಿ ತೋರಿಸುವದು ಭಾರತೀಯರ ಕರ್ತವ್ಯವಾಗಿದೆ. ಇದರ ಹೊಣೆ ಹೆಚ್ಚಾಗಿ ಪೋಲೀಸಪಡೆಯ ಮೇಲಿರುವದೆಂಬುದು ನಿರ್ವಿವಾದವು. ಆದುದರಿಂದ ಪೋಲೀಸರು ತಮ್ಮ ಮುಖ್ಯಾಧಿಕಾರಿಗಳ ಸಂದೇಶದಂತೆ ಒಳ್ಳೆ ದಕ್ಷತೆಯಿಂದ ಕಾರ್ಯ ಮಾಡಿ ಜನಾದರಕ್ಕೆ ಪಾತ್ರರಾಗಬೇಕು. ಪೋಲೀಸರೆಂದರೆ ತಮ್ಮನ್ನು ಹಿಂಡಿಹಿಪ್ಪೆ ಮಾಡತಕ್ಕವರು ಎಂಬ ಭಯ ತಪ್ಪಿ ಅವರು ತಮ್ಮ ಮಿತ್ರರು, ಪ್ರತಿಯೊಂದು ಕಾರ್ಯದಲ್ಲಿ ತಮಗೆ ನೆರವಾಗತಕ್ಕವರು ಎಂಬ ಭಾವನೆ ಜನತೆಯಲ್ಲಿ ಬೇರೂರುವಂತೆ ಪೋಲೀಸರು ತಮ್ಮ ಆಚರಣೆಯಿಂದ ಸಿದ್ಧಮಾಡಿ ತೋರಿಸಬೇಕು.

## ಮೈಸೂರು ಸತ್ಯಾಗ್ರಹ

ಮೈಸೂರು ಸರಕಾರ ಬೇರೆ ವಿಷಯಗಳಲ್ಲಿ ಪ್ರಗತಿಪರವಾಗಿದ್ದರೂ ರಾಜಕೀಯ ಹಕ್ಕುಬಾಧ್ಯತೆಗಳನ್ನು ಕೊಡುವಲ್ಲಿ ಬಹಳ ಪ್ರತಿಗಾಮಿಯಾಗಿದೆಂದು ವಿಷಾದದಿಂದ ಹೇಳಬೇಕಾಗುವುದು. ಪ್ರಜೆಗಳಿಗೆ ಹೊಣೆಗಾರವಾದ ಆಡಳಿತವನ್ನು ಸ್ಥಾಪಿಸಿರೆಂದು ಪ್ರಜೆಗಳು ಒಂದೇ ಸಮನೆ ಕೇಳಿಕೊಳ್ಳುತಿದ್ದರೂ ಮಹಾರಾಜಾ ಸರಕಾರದವರು ಅದನ್ನು ದುರ್ಲಕ್ಷಿಸಿ ಅಲ್ಪಸ್ವಲ್ಪ ಸುಧಾರಣೆಗಳನ್ನು ಜಾರಿಯಲ್ಲಿ ತರುತ್ತ ನಡೆದಿರುವರು. ಇದರಿಂದ ಅಸಮಾಧಾನವೆ ಸಂಸ್ಥಾನದಲ್ಲಿ ಹೆಚ್ಚಿದೆ. ಮಹಾರಾಜರ ಕೃಪಾಛತ್ರದಲ್ಲಿ ಹೊಣೆಗಾರ ಸರಕಾರವನ್ನು ಸ್ಥಾಪಿಸಿಕೊಳ್ಳಬೇಕೆಂಬ ಧ್ಯೇಯದಿಂದ ಸ್ಥಾಪಿತವಾದ ಕಾಂಗ್ರೆಸ್ಸಿನ ಮೇಲೆಯಂತೂ ಮೈಸೂರ ಸರಕಾರದ ವಕ್ರದೃಷ್ಟಿ ಯಾವಾಗಲೂ ಇದ್ದುದೆ! ಮೈಸೂರ ಸರಕಾರ ಮತ್ತು ಮೈಸೂರು ಸಂಸ್ಥಾನ ಕಾಂಗ್ರೆಸ್ಸು ಇವುಗಳಲ್ಲಿ ನಡೆದ ತಿಕ್ಕಾಟವನ್ನು ನೋಡಿದರೆ ಈ ಮಾತು ಮುಂದಟ್ಟಾಗುವದು. ಭಾರತದಲ್ಲಿ ಸ್ವಾತಂತ್ರ್ಯ ಸಂಸ್ಥಾಪಿತವಾಗಿದ್ದರೂ ಮಾದರಿ ಮೈಸೂರಿನಲ್ಲಿ ಹೊಣೆಗಾರ ರಾಜ್ಯ ಪ್ರಸ್ಥಾಪನೆಗಾಗಿ ಸತ್ಯಾಗ್ರಹದಂಥ ಉಗ್ರ-ಅಸ್ತ್ರವನ್ನು ಹಿರಿಯುವ ಪ್ರಸಂಗ ಬಂದುದು ದುರ್ದೈವವಾಗಿದೆ. ಈ ಸ್ವಾತಂತ್ರ್ಯದ ಶುಭ ಮುಹೂರ್ತದಲ್ಲಿ ಇಡೀ ಮೈಸೂರು ಸಂಸ್ಥಾನದಲ್ಲಿ ಸತ್ಯಾಗ್ರಹ ಸುರುವಾಗುವದು ಶೋಚನೀಯವು. ಅದರ ಸಿದ್ಧತೆ ಎಲ್ಲೆಡೆ ಭರದಿಂದ ನಡೆದಿವೆಂಬುದು ಅಲ್ಲಲ್ಲಿನ ವರದಿಗಳಿಂದ ಗೊತ್ತಾಗುವದು. ಮಾದರಿ ಮೈಸೂರು ಇಷ್ಟೊಂದು ಪ್ರತಿಗಾಮಿ ಆಗಲಿಕ್ಕಿಲ್ಲೆಂದು ನಮ್ಮ ಅಭಿಪ್ರಾಯ. ಅರಸುಮನೆತನದ ಶ್ರೀ ನಂಜರಾಜ ಅರಸರು ಪ್ರಕಟಿಸಿದ ಪ್ರಕಟನೆಯನ್ನು ನೋಡಿದರೆ ಮೈಸೂರು ಸರಕಾರದ ಪ್ರತಿಗಾಮೀ ಧೋರಣದ ಸ್ಪಷ್ಟ ಕಲ್ಪನೆ ಬರುವಂತಿದೆ. ಮೈಸೂರು ಹಿಂದೀ ಒಕ್ಕೂಟವನ್ನು ತಡವಾಗಿ ಸೇರಿದ್ದು, ಆಗಸ್ಟ ಸ್ವಾತಂತ್ರ್ಯ ದಿನವನ್ನು ಮೈಸೂರಿನಲ್ಲಿ ವಿಜೃಂಭಣೆಯಿಂದ ಆಚರಿಸದಿದ್ದುದು ಇವೆರಡು ಉದಾಹರಣೆಗಳನ್ನು ಕೊಟ್ಟು ಅವರು ಸರಕಾರದ ಪ್ರತಿಗಾಮಿ ಸ್ವರೂಪವನ್ನು ನಿದರ್ಶಿಸಿದ್ದಾರೆ. ಮೈಸೂರ ಸರಕಾರ ಇನ್ನಾದರೂ ಈ ಧೋರಣವನ್ನು ಬದಲಿಸಿಕೊಂಡು ಜನತೆಗೆ ಬೇಕಾದ ಹೊಣೆಗಾರ ಸರಕಾರವನ್ನು ಕೊಟ್ಟು ಸತ್ಯಾಗ್ರಹವನ್ನು ತಪ್ಪಿಸಿ ಶ್ರೇಯೋಭಾಗಿಗಳಾಗಬೇಕೆಂದು ಹಾರೈಸುತ್ತೇವೆ.

## ಸ್ವಾಗತಾರ್ಹ ಧೋರಣೆ

ಬ್ರಿಟಿಶರು ತಮ್ಮ ಆಡಳಿತವನ್ನು ಸರಾಗವಾಗಿ ಸಾಗಿಸಿಕೊಳ್ಳಬೇಕೆಂದು ಭಾರತೀಯರಲ್ಲಿಯೆ ವಿವಿಧ ಭೇದಗಳನ್ನು ಕಲ್ಪಿಸಿದ್ದುಂಟು. ಜಾತೀಯ ಭೂತವನ್ನು ಹೊಡೆದೆಬ್ಬಿಸಿ ಜಾತಿ ಜಾತಿಗಳಲ್ಲಿ ತಿಕ್ಕಾಟಕ್ಕೆ ಅವಕಾಶವುಂಟುಮಾಡಿ ತಮ್ಮ ಆಡಳಿತ ಭದ್ರಮಾಡಿಕೊಂಡದ್ದುಂಟು. ಪ್ರತ್ಯೇಕ ಮತದಾರ ಸಂಘಗಳು ಮತ್ತು ಸರಕಾರೀ ನವಕರಿಗಳಲ್ಲಿ ಜಾತೀಯತೆಗೆ ಪ್ರಾಶಸ್ತ್ಯ ಕೊಟ್ಟದ್ದು ಇವೆರಡು ಈ ದಿಸೆಯಲ್ಲಿ ಮಹತ್ವವಾದವುಗಳು. ಇವೆರಡರ ಬಲುಮೆಯಿಂದಲೆ ಇಲ್ಲಿನ ಜನರಲ್ಲಿ ಕಲಹವನ್ನೆಬ್ಬಿಸಿ ಬ್ರಿಟಿಶರು ತಮ್ಮ ಬೇಳೆಯನ್ನು ಬೇಯಿಸಿಕೊಂಡದ್ದುಂಟು. ಆದರೀಗ ಬ್ರಿಟಿಶರ ಆಳಿಕೆ ಕೊನೆಗಂಡು ಭಾರತದಲ್ಲಿ ಸ್ವರಾಜ್ಯ ಪ್ರಸ್ಥಾಪಿತವಾಗಿರುವದರಿಂದ ಸ್ವರಾಜ್ಯ ಸರಕಾರದವರು ಇವೆರಡೂ ಪ್ರತಿಗಾಮಿ ಯೋಜನೆಗಳನ್ನು ಬಿಟ್ಟುಗೊಡಲು ಅಣಿಯಾದುದು ಸಂತೋಷದ ಸಂಗತಿಯಾಗಿದೆ. ಅಲ್ಪಸಂಖ್ಯಾಕರ ನೆವ ಮುಂದೆ ಮಾಡಿ ಪ್ರತ್ಯೇಕ ಮತದಾರ ಸಂಘಗಳನ್ನೇರ್ಪಡಿಸಿ ರಾಷ್ಟ್ರೀಯತ್ವಕ್ಕೆ ಅರಿದಾಳ ಬಡೆದದ್ದನ್ನು ಹೋಗಲಾಡಿಸಿ ಕೇಂದ್ರ ಮತ್ತು ಪ್ರಾಂತೀಯ ಶಾಸನಸಭೆಗಳ ಆಯ್ಕೆ ಪ್ರತ್ಯೇಕ ಮತದಾರ ಸಂಘದ ಬದಲು ಸಂಯುಕ್ತ ಮತದಾರ ಸಂಘದ ತಳಹದಿಯ ಮೇಲೆ ನಡೆಯಬೇಕೆಂದೂ ಮೊದಲಿನ ಹತ್ತು ವರುಷಗಳ ವರೆಗೆ ಮನ್ನಣೆ ಪಡೆದ ಅಲ್ಪಸಂಖ್ಯಾಕ ವರ್ಗಗಳಿಗೆ ಅವರ ಜನಸಂಖ್ಯೆಗನುಗುಣವಾಗಿ ಎಲ್ಲ ಶಾಸನ ಸಭೆಗಳಲ್ಲಿ ಸ್ಥಳಗಳು ಕಾಯ್ದಿಡಲ್ಪಡಬೇಕೆಂದೂ ಆಂಗ್ಲೊ ಇಂಡಿಯನ್‌ರಿಗೆ ಮೊದಲಿನ ಹತ್ತು ವರುಷ ಸಂರಕ್ಷಣ ಕೊಡಬೇಕೆಂದೂ ಘಟನಾ ಸಮಿತಿಯ ಅಲ್ಪಸಂಖ್ಯಾಕ ಸಲಹೆ ಸಮಿತಿಯು ಸೂಚಿಸಿದೆ. ಘಟನಾ ಸಮಿತಿಯು ಈ ವರದಿಯ ವಿಚಾರವನ್ನು ಮಾಡಿ ಸೂಕ್ತ ನಿರ್ಣಯವನ್ನು ಕೈಕೊಳ್ಳಲಿದೆ. ಪ್ರತ್ಯೇಕ ಮತದಾರ ಸಂಘಗಳು ಮಾಯವಾದರೆ ಜಾತೀಯತೆಯ ಭೂತವು ಬಹಳ ಮಟ್ಟಿಗೆ ಕಡಿಮೆಯಾಗುವಲ್ಲಿ ಸಂದೇಹವಿಲ್ಲ. ಸರಕಾರಿ ನವಕರಿಗಳಲ್ಲಿ ಜಾತೀಯತೆಗೆ ಕೊಟ್ಟ ಪ್ರಾಶಸ್ತ್ಯವನ್ನು ಹೋಗಲಾಡಿಸಿ ಯೋಗ್ಯತೆಯಿದ್ದವರಿಗೆ ಮಾತ್ರ ನವಕರಿ ಕೊಡಲಾಗುವದೆಂದು ಈ ಸಲಹೆ ಸಮಿತಿಯ ವರದಿಯಲ್ಲಿ ಅಭಿಪ್ರಾಯ ಪಡಲಾಗಿದೆ. ಸರದಾರ ವಲ್ಲಭಭಾಯರು ಈ ವರದಿಯನ್ನು ಮಂಡಿಸುವಾಗ ಈ ವಿಷಯವನ್ನು ಸ್ಪಷ್ಟೀಕರಿಸುತ್ತ ಸರಕಾರೀ ನವಕರರನ್ನು ನೇಮಿಸಿಕೊಳ್ಳುವಾಗ ಯೋಗ್ಯತೆಯ ಹೊರತು ಬೇರಾವ ವಿಚಾರವನ್ನೂ ಲಕ್ಷ್ಯಕ್ಕೆತೆಗೆದುಕೊಳ್ಳಲಾಗುವದಿಲ್ಲೆಂದು ಹೇಳಿದರು. ಇವೆರಡೂ ಸ್ವಾಗತಾರ್ಹವಾದ ಸುಧಾರಣೆಗಳಾಗಿದ್ದು ಅಲ್ಪ ಸಂಖ್ಯಾಕರು ಕೂಡ ರಾಷ್ಟ್ರೀಯ ದೃಷ್ಟಿಯಿಂದ ಇವನ್ನು ಸ್ವಾಗತಿಸಬಹುದಾಗಿದೆ.

# ಹಿಂದೀ ಒಕ್ಕೂಟಕ್ಕೆ ಬಲಿಷ್ಠ ಕೇಂದ್ರ ಸರಕಾರ

## ಕೇಂದ್ರ ಮತ್ತು ಪ್ರಾಂತ ಸರಕಾರಗಳ ಅಧಿಕಾರವ್ಯಾಪ್ತಿ — ಪ್ರಾಂತಗಳಿಗೆ ವಿಶೇಷ ಅಧಿಕಾರ ಕೊಡಲು ಮೈಸೂರ ದಿವಾಣರ ಬಿನ್ನಹ— ಸಂಯುಕ್ತ ದಕ್ಷಿಣ ಸಂಸ್ಥಾನದ ಕರಾರ ಪತ್ರ—

### ಘಟನಾಸಮಿತಿಯ ಕಾರ್ಯಕಲಾಪ

ಹಿಂದುಸ್ತಾನದ ಘಟನಾಸಮಿತಿಯು ಆಗಸ್ಟ ೨೧ ರಲ್ಲಿ ಡಾ. ರಾಜೇಂದ್ರ ಪ್ರಸಾದರ ಅಧ್ಯಕ್ಷತೆಯಲ್ಲಿ ಸೇರಿದಾಗ ಒಕ್ಕೂಟದ ಅಧಿಕಾರದ ವ್ಯಾಪ್ತಿಯ ಬಗ್ಗೆ ರಭಸವಾದ ಚರ್ಚೆ ನಡೆಯಿತು.

ಒಕ್ಕೂಟದ ಹಣಕಾಸಿನ ವ್ಯವಹಾರ; ಒಕ್ಕೂಟ ಹಾಗೂ ಅಂಗಗಳಲ್ಲಿ ತೆರಿಗೆ, ಅಧಿಕಾರ ವಿತರಣ; ಪ್ರಾಂತಿಕ ವೈಧಾನಿಕ ಅಧಿಕಾರ ಕ್ಷೇತ್ರ ಇವುಗಳ ಮೇಲೆ ಚರ್ಚೆ ಪ್ರಾರಂಭವಾದಾಗ ಶ್ರೀ ಅಲ್ಲಾದಿ ಕೃಷ್ಣಸ್ವಾಮಿ ಅಯ್ಯರರು, "ಯಾವ ಕರ ಹೇರಿದರೂ ವ್ಯಕ್ತಿ ಅಥವಾ ಸಂಸ್ಥೆಯ ಮೇಲೆ ಹೇರಬೇಕಾಗುತ್ತದೆ. ಕರ ಕೊಡುವ ಶಕ್ತಿ ಅಪರಿಮಿತವಾಗಿವೆಯೆಂದು ಹೇಳಲು ಬರದು. ರಾಷ್ಟ್ರದ ಔದ್ಯೋಗಿಕ ಮತ್ತು ಒಕ್ಕಲತನದ ಪರಿಸ್ಥಿತಿಗಳಲ್ಲಿ ನಿಕಟ ಸಂಬಂಧವಿದ್ದು ಒಂದರ ಮೇಲೆ ಕರಹೇರಿದರೆ ಇನ್ನೊಂದರ ಮೇಲೆ ಪರಿಣಾಮವಾಗದಿರದು"—ಎಂದು ಒಕ್ಕೂಟ ಅಧಿಕಾರ ವ್ಯಾಪ್ತಿ ಸಮಿತಿಯ ವರದಿಯನ್ನು ಸಮರ್ಥಿಸಿ ಮಾತನಾಡಿದರು.

### ಸದಸ್ಯರ ಭಾಷಣ

ಅನಂತರ ಸದಸ್ಯರ ಭಾಷಣ ಪ್ರಾರಂಭವಾದಾಗ ಪಂ. ಬಾಲಕೃಷ್ಣ ಶರ್ಮರು ಬಲಿಷ್ಠ ಕೇಂದ್ರವಿದ್ದರೆ ಪ್ರಾಂತಗಳಿಗೆ ಧಕ್ಕೆಯಿಲ್ಲವೆಂದರು. ಮೌಲಾನಾ ಹಜರತ್ ಮೋಹಾನಿಯವರು ಸಾಮ್ಯವಾದಿ ಪ್ರಜಾರಾಜ್ಯ ಸ್ಥಾಪಿಸಬೇಕೆಂದರು. ಶ್ರೀ ಗಗನವಿಹಾರಿ ಮೆಹ್ತಾರು ಶ್ರೀ ಸಂತಾನಮರ ಪ್ರಾಂತಗಳ ಅಧಿಕಾರ ಹೆಚ್ಚಿಸಬೇಕೆಂಬ ಅಭಿಪ್ರಾಯಕ್ಕೆ ವಿರುದ್ಧವಾಗಿ ರಾಷ್ಟ್ರದಲ್ಲಿಯ ಒಕ್ಕಟ್ಟಿನ ಆವಶ್ಯಕತೆಯನ್ನು ಒತ್ತಿ ಹೇಳಿದರು ಮತ್ತು ಕೇಂದ್ರವು ಪ್ರಾಂತಗಳಿಗೆ ಯಾವ ಯಾವ ಅಧಿಕಾರಗಳನ್ನು ಕೊಡಬೇಕೆಂಬುದನ್ನು ಚರ್ಚಿಸಿದೆ, ಇಂಥಿಂಥ ಅಧಿಕಾರಗಳನ್ನು ಪ್ರಾಂತಗಳು ನಿರ್ವಹಿಸಬಲ್ಲವೇ?—ಎಂದು ವಿಚಾರಿಸುವದು ಸೂಕ್ತವೆಂದು ಅಭಿಪ್ರಾಯಪಟ್ಟರು.

### ಮುದಲಿಯಾರರ ಮತ

ಮೈಸೂರಿನ ದಿವಾನರಾದ ಸರ್. ಎ. ರಾಮಸ್ವಾಮಿ ಮುದಲಿಯಾರರು ಒಕ್ಕೂಟದ ಅಂಗಗಳಾದ ಪ್ರಾಂತಗಳಿಗೆ ಹೆಚ್ಚಿನ ಅಧಿಕಾರ ಕೊಡಬೇಕೆಂದು ವಾದಿಸುತ್ತ, "ಕೇಂದ್ರವು ಬಲಿಷ್ಠವಿರಬಾರದೆಂದು ಯಾರೂ ಬಯಸುವುದಿಲ್ಲ. ಇದು ಕೇಂದ್ರ ಮತ್ತು ಪ್ರಾಂತಗಳ ದ್ವಂದ್ವವೂ ಅಲ್ಲ. ಒಕ್ಕೂಟ ಸೇರಿದ ಸಂಸ್ಥಾನಗಳು ಈ ವಿಷಯದಲ್ಲಿ ಗಾಬರಿಯಾಗಿಲ್ಲ. ಆದರೆ ಪ್ರಾಂತಗಳಿಗೆ ಕೊಡಮಾಡಿದ ಕರಗಳ ಅಧಿಕಾರದಿಂದ ಅವು ಕೈಕೊಳ್ಳಬೇಕಾದ ರಾಷ್ಟ್ರಪೋಷಕ ಕಾರ್ಯಗಳಿಗೆ ಸಾಕಷ್ಟು ಹಣ ದೊರೆಯುವುದೆ?" ಎಂದು ಹೇಳಿ ಪಾನನಿರೋಧ, ಜಮೀನುದಾರಿ ನಾಶ ಇತ್ಯಾದಿಗಳಿಂದ ಹೇಗೆ ಪ್ರಾಂತದ ಆದಾಯ ಇಳಿಯುತ್ತದೆಂಬುದನ್ನು ವಿವರಿಸಿ, "ಈಗ ಸೂಚಿಸಲಾದ ಹಂಚಿಕೆಯಿಂದ ಕೆಲವು ಬಾಬುಗಳಲ್ಲಿ ಆರ್ಥಿಕ ಪರಿಸ್ಥಿತಿ ಹದಗೆಡುವುದರಿಂದ ಕೇಂದ್ರಕ್ಕೆ ಕೊಡಲಾದ ಕೆಲವು ಬಾಬುಗಳಲ್ಲಿ ಪ್ರಾಂತಗಳಿಗೂ ಪಾಲಿರಬೇಕು. ಇಲ್ಲದಿದ್ದರೆ ಪ್ರಾಂತಿಕ ಸ್ವಾಯತ್ತತೆಯು ಬಹಳ ಬಡವಾಗುವುದು" ಎಂದು ವಾದಿಸಿದರು.

### ಆಸಾಮ ಪ್ರತಿನಿಧಿಯ ವಿರೋಧ

ಆ ಬಳಿಕ ಆಸಾಮಿನ ಪ್ರತಿನಿಧಿಯಾದ ಶ್ರೀ ಕುಮಾರದಾಸರು ಒಟ್ಟಿನ ಮೇಲೆ ಮೂಲ ವರದಿಗೆ ತಮ್ಮ ಬೆಂಬಲವಿದೆಯಾದರೂ ಕೇಂದ್ರವನ್ನು ಬಲಿಷ್ಠವಿಡುವ ಉತ್ಸಾಹದಲ್ಲಿ ಪ್ರಾಂತಗಳನ್ನು ದುರ್ಬಲಗೊಳಿಸಬಾರದೆಂದರು. ಮತ್ತು ಸ್ಥಳ ಬಿಟ್ಟು ಸ್ಥಳಕ್ಕೆ ವಲಸೆ ಹೋಗುವುದನ್ನು ಕೇಂದ್ರದ ಅಧಿಕಾರದೊಳಗೆ ತಂದಿರುವುದನ್ನು ವಿರೋಧಿಸಿದರು. ಆಸಾಮ ಸ್ವತಃ ವಲಸೆ ಬರುವ ಪ್ರಶ್ನೆಯನ್ನು ಎದುರಿಸಬೇಕಾಗಿದ್ದರಿಂದ ಆ ವಿಷಯದಲ್ಲಿ ಬೇರೊಂದು ಉಭಯ ಹಿತಸಾಧಕ ವ್ಯವಸ್ಥೆ ಮಾಡಿದರೊಳ್ಳೆಯದೆಂದು ಅವರು ಅಭಿಪ್ರಾಯಪಟ್ಟರು.

### ಸಂಸ್ಥಾನಗಳ ಸ್ಥಾನ

ಬಡೋದೆಯ ಪ್ರತಿನಿಧಿಗಳಾದ ಸರ್ ಬಿ. ಎಲ್. ಮಿತ್ರರು ಮೂಲ ವರದಿಯಲ್ಲಿ ಕೇಂದ್ರಕ್ಕೆ ಕೊಡಲಾದ ಅಧಿಕಾರ ವ್ಯಾಪ್ತಿಯನ್ನು ಸಮರ್ಥಿಸಿ ರಾಷ್ಟ್ರೀಯ ಹಿತದೃಷ್ಟಿಯಿಂದ ಹಾಗೆ ನಿಯಮಗಳನ್ನು ರಚಿಸಲಾಗಿರುವುದರಿಂದ ಅದು ಸಾಧುವೆಂದು ವಾದಿಸಿದರು. ಮತ್ತು ಸದ್ಯದಲ್ಲಿ ಪ್ರಾಂತ ಮತ್ತು ಸಂಸ್ಥಾನಗಳಲ್ಲಿ ಭೇದ ಮಾಡಲು ಸಂಸ್ಥಾನಗಳು ಹಿಂದುಳಿದಿದ್ದು ಅವಕ್ಕೆ ಕೆಲವು ಕಾಲಾವಕಾಶಕೊಡಬೇಕೆಂಬುದೇ ಕಾರಣವೆಂದೂ ಕಾಲಕ್ರಮೇಣ ಅವು ಪ್ರಾಂತಕ್ಕೆ ಎಲ್ಲದೂ ವಿಧದಲ್ಲೂ ಸರಿಸಮವಾಗುವುವೆಂದೂ ಹೇಳಿದರು.

### ಶ್ರೀ ಗೋಪಾಲಸ್ವಾಮಿ ಅಯ್ಯಂಗಾರರ ಉತ್ತರ

ಮೇಲಿನ ಮಾತನ್ನು ಸಮರ್ಥಿಸುತ್ತ ಸಂಸ್ಥಾನಗಳನ್ನು ಮುಂದಕ್ಕೆ ತಂದು ಪ್ರಾಂತಗಳಿಗೂ ಅವುಗಳಿಗೂ ಇರುವ ಭೇದಗಳನ್ನು ಎಲ್ಲರ ಸಮ್ಮತಿಯಿಂದ ಇಲ್ಲದಂತೆ ಮಾಡುವುದೇ ಕೊನೆಯ ಗುರಿಯೆಂಬುದಾಗಿ ಶ್ರೀ ಅಯ್ಯಂಗಾರರು ಹೇಳಿದರು; ಮತ್ತು ಈಗ ಸೂಚಿಸಿರುವ ಪದ್ಧತಿ ಉಳಿದ ದೇಶಗಳ ಪದ್ಧತಿಗಿಂತ ಉತ್ತಮವಿದೆಯೆಂದೂ ಹಿಂದುಸ್ತಾನದ ಶಕ್ತಿಸಾಮರ್ಥ್ಯ, ಬಡತನ ಮತ್ತು ಇತರ ವಿಶಿಷ್ಟ ಪರಿಸ್ಥಿತಿಯನ್ನನುಲಕ್ಷಿಸಿ ವರದಿಯನ್ನು ಸಿದ್ಧ ಮಾಡಿದೆಯೆಂದೂ ವಿಶದಪಡಿಸಿ ಕೇಂದ್ರ ಮತ್ತು ಪ್ರಾಂತಗಳಲ್ಲಿಯ ಅಧಿಕಾರ ವಿತರಣವನ್ನನುಸರಿಸಿ ಕರಹೇರುವ ಅಧಿಕಾರವನ್ನು ವಿಭಾಗಿಸಲಾಗಿದೆಯೆಂದು ಅವರು ವಿವರಿಸಿದರು.

ದಂಡಿನ ಪ್ರದೇಶಗಳ ಆಡಳಿತಕ್ಕೆ ಸಂಬಂಧಿಸಿದ ಕಲಮು ಶ್ರೀ ಗೋಪಾಲಸ್ವಾಮಿ ಅಯ್ಯಂಗಾರರ ಸೂಚನೆಯ ಮೇರೆಗೆ ತಡೆಹಿಡಿಯಲ್ಪಟ್ಟಿತು. ಆ ಬಗ್ಗೆ ಚರ್ಚೆ ನಡೆದಾಗ ಶ್ರೀ ಆರ್. ಕೆ. ಸಿಧ್ವಾರು ದಂಡಿನ ಪ್ರದೇಶಗಳಲ್ಲಿದ್ದವರಿಗೆ ನಾಗರಿಕ ಪ್ರದೇಶಗಳಲ್ಲಿದ್ದವರಷ್ಟೇ ಸೌಕರ್ಯಗಳು ದೊರೆಯಬೇಕೆಂದು ಸೂಚಿಸಿದರು.

ಬಂದೂಕು, ಮದ್ದುಗುಂಡು ಇತ್ಯಾದಿ ಸ್ಫೋಟಕಗಳನ್ನು ಪ್ರಾಂತಗಳ ಪಟ್ಟಿಯಲ್ಲಿ ತರಬೇಕೆಂದು ಶ್ರೀ ನಾಜಿರುದ್ದೀನ್ ಅಹಮ್ಮದರು ತಿದ್ದುಪಡಿ ತಂದರು.

ಜಾಗತಿಕ ಪರಿಷತ್ತುಗಳಲ್ಲಿ ಭಾಗವಹಿಸಲು ಮತ್ತು ಅಲ್ಲಿಯ ನಿರ್ಣಯಗಳನ್ನು ಬಳಕೆಯಲ್ಲಿ ತರಲು ಕೇಂದ್ರಕ್ಕೆ ಅಧಿಕಾರವಿರಬೇಕೆಂಬುದರ ಬಗ್ಗೆ ದೊಡ್ಡ ಚರ್ಚೆ ನಡೆದು ಅಂತ್ಯದಲ್ಲಿ ಶ್ರೀ ಅಯ್ಯಂಗಾರರು ಅಂತಹ ಪರಿಷತ್ತುಗಳಿಗೆ ಇಡಿಯ ಭಾರತದ ಪ್ರತಿನಿಧಿಗಳು ಹೋಗುವುದರಿಂದ ಅಲ್ಲಿಯ ತೀರ್ಮಾನಗಳನ್ನು ಬಳಕೆಯಲ್ಲಿ ತರುವ ಅಧಿಕಾರ ಕೇಂದ್ರಕ್ಕಿರುವುದು ಸಹಜವೆಂದು ಉತ್ತರವಿತ್ತರು.

ವಿದೇಶಗಳಲ್ಲಿ ಎತ್ತಲಾಗುವ ಸಾಲದ ಬಗ್ಗೆ ಸಂಯುಕ್ತ ಸರಕಾರಕ್ಕಿರುವ ಅಧಿಕಾರವನ್ನು ನಿಯಮಿತಗೊಳಿಸುವ ಬಗ್ಗೆ ಶ್ರೀ ಮಹೇಶ್ವರಿಯವರು ಮಂಡಿಸಿದ ತಿದ್ದುಪಡಿಯನ್ನು ಶ್ರೀ ಗೋಪಾಲಸ್ವಾಮಿ ಅಯ್ಯಂಗಾರರು ವಿರೋಧಿಸುತ್ತ ಕೇಂದ್ರದ ಒಪ್ಪಿಗೆ ಪಡೆಯದೆ ಘಟಕಗಳು ವಿದೇಶಗಳಲ್ಲಿ ಖಾಸಗಿ ಸಾಲವನ್ನು ನಿಯಂತ್ರಿಸುವ ಅಧಿಕಾರ ಒಕ್ಕೂಟ ಶಾಸನ ಸಭೆಗಿದೆಯೆಂದರು. ಅನಂತರ ತಿದ್ದುಪಡಿ ಬಿದ್ದುಹೋಗಿ ಬಹುಮತದಿಂದ ಮೂಲ ಕಲಮು ಪಾಸಾಯಿತು. ಅದಾದ ಬಳಿಕ ಯುದ್ಧ ಮತ್ತು ಶಾಂತಿ ವಿದೇಶಗಳೊಡನೆ ಒಡಂಬಡಿಕೆ ಮಾಡಿಕೊಳ್ಳುವುದು— ಮೊದಲಾದ ಕಲಮುಗಳು ಪಾಸಾದವು.

### ಅಲ್ಪಸಂಖ್ಯಾಕರ ಬಗ್ಗೆ ವರದಿ

ಅಲ್ಪಸಂಖ್ಯಾಕರ ಬಗ್ಗೆ ಸಲಹೆ ಕೊಡಲು ನಿಯಮಿಸಲಾದ ಸಮಿತಿಯ ಅಧ್ಯಕ್ಷರಾದ ಸರದಾರ ಪಟೇಲರು ತಮ್ಮ ಸಮಿತಿ ತಯಾರಿಸಿದ ಮೂರು ವರದಿಗಳನ್ನು ಘಟನಾ ಸಮಿತಿಗೊಪ್ಪಿಸಿದರು. ವರದಿಗಳನ್ನು ವಿವರಿಸುತ್ತ ಸರದಾರರು ಪ್ರತ್ಯೇಕ ಮತದಾರ ಪದ್ಧತಿಯನ್ನು ಅಲ್ಪಸಂಖ್ಯಾಕರ ಹಾಗೂ ರಾಷ್ಟ್ರದ ರಾಜಕೀಯ ಜೀವನದ ದೃಷ್ಟಿಯಿಂದ ತೆಗೆದು ಹಾಕುವ ನಿರ್ಧಾರಕ್ಕೆ ಬರಲಾಯಿತೆಂದೂ ಅದರ ಬದಲು ಸಂಯುಕ್ತ ಮತದಾರ ಪದ್ಧತಿಯ ತಳಹದಿಯ ಮೇಲೆ ಎಲ್ಲ ಶಾಸನ ಸಭೆಗಳ ಚುನಾವಣೆಗಳು ನಡೆಯಬೇಕೆಂದೂ ಅದರ ೧೦ ವರ್ಷಗಳ ವರೆಗೆ ಅಲ್ಪಸಂಖ್ಯಾಕರನ್ನು ೩ ವರ್ಗಗಳನ್ನಾಗಿ ವಿಂಗಡಿಸಿ ಅವರ ಜನಸಂಖ್ಯೆಗನುಗುಣವಾಗಿ ಸ್ಥಳಗಳನ್ನು ಕಾಯ್ದಿಡಲಾಗುವುದೆಂದೂ ಹೇಳಿದರು. 'ಅ' ವರ್ಗದಲ್ಲಿ ನೂರಕ್ಕೆ ಅರ್ಧದಷ್ಟಿರುವ ಆಂಗ್ಲೋ ಇಂಡಿಯನ್ ಮತ್ತು ಪಾರಸಿಗಳೂ 'ಆ' ವರ್ಗದಲ್ಲಿ ಅರ್ಧಕ್ಕಿಂತ ಹೆಚ್ಚು ೧½ ಗಿಂತ ಕಡಿಮೆಯಿರುವ ಹಿಂದೀ ಕ್ರಿಶ್ಚಿಯನ್ ಮತ್ತು ಶೀಖರೂ 'ಇ' ವರ್ಗದಲ್ಲಿ ನೂರಕ್ಕೆ ೧½ ಗಿಂತ ಹೆಚ್ಚು ಜನಸಂಖ್ಯೆಯಿರುವ ದಲಿತ ವರ್ಗ ಹಾಗೂ ಮುಸಲಮಾನರೂ ಇರುವರು.

### ಸಂಯುಕ್ತ ದಕ್ಷಿಣ ಸಂಸ್ಥಾನ

ಸಾಂಗ್ಲಿ, ಫಲ್ಟನ, ಹಿರಿಯ ಕುರಂದವಾಡ, ಬುಧಗಾಂವ, ಭೋರ ರಾಮದುರ್ಗ ಮತ್ತು ಔಂಧ ಸಂಸ್ಥಾನಾಧಿಪತಿಗಳು ಒಂದುಗೂಡಿ ಸಂಯುಕ್ತ ದಕ್ಷಿಣ ಸಂಸ್ಥಾನವನ್ನು ರಚಿಸಲು ನಿರ್ಧರಿಸಿದ್ದಾರೆಂದು ತಿಳಿದುಬರುತ್ತದೆ. ಶ್ರೀ ಕನ್ನಯ್ಯಲಾಲ ಮುನಶಿಯವರು ತಯಾರಿಸಿದ ಕರಾರಪತ್ರಕ್ಕೆ ಈ ಸಂಸ್ಥಾನಾಧಿಪರು ಒಪ್ಪಿದ್ದಾರೆ. ಈ ಕರಾರ ಪತ್ರದ ಸಾರಾಂಶವನ್ನು ಕೆಳಗೆ ಕೊಡಲಾಗಿದೆ.

ಮೇಲೆ ಕಾಣಿಸಿದ ಸಂಸ್ಥಾನಗಳು ಒಂದುಗೂಡಿ ಒಂದೇ ಸಂಯುಕ್ತ ಸಂಸ್ಥಾನವಾಗುವವು. ಅದಕ್ಕೆ ಸಂಯುಕ್ತ ದಕ್ಷಿಣ ಸಂಸ್ಥಾನವೆಂದು ಕರೆಯಲಾಗುವದು. ಈ ಕರಾರಪತ್ರಕ್ಕೆ ಮನ್ನಣೆ ಕೊಡುವ ಬೇರೆ ಸಂಸ್ಥಾನಿಕರ ಸಂಸ್ಥಾನಗಳೂ ಈ ಸಂಯುಕ್ತ ಸಂಸ್ಥಾನದಲ್ಲಿ ಸೇರಬಹುದು. ಸಂಯುಕ್ತ ಸಂಸ್ಥಾನವು ಪ್ರಜಾಪ್ರಭುತ್ವದ್ದಾಗುವದು. ಈ ಕರಾರಪತ್ರದ ವ್ಯತಿರಿಕ್ತ ಎಲ್ಲ ಅಧಿಕಾರವು ಪ್ರಜಾದತ್ತವೆಂದು ಭಾವಿಸಲಾಗುವದು.

### ಕಾಯಿದೆ ಮಂಡಳ

ರಾಜ ಪ್ರಮುಖ ಮತ್ತು ಲೋಕ ಸಭೆಗಳೇ ಸಂಯುಕ್ತ ಸಂಸ್ಥಾನದ ಕಾಯದೆ ಮಂಡಳ. ರಾಜ ಪ್ರಮುಖನ ಹೆಸರಿನಿಂದಲೇ ಆಡಳಿತ ನಡೆಯತಕ್ಕದ್ದು.

ಈ ಪ್ರಕಾರ ಪತ್ರಕ್ಕೆ ಸಹಿ ಹಾಕಿದ ಸಂಸ್ಥಾನಿಕರ ಮಂಡಳಕ್ಕೆ ರಾಜಮಂಡಳವೆಂದು ಕರೆಯಲಾಗುವದು. ಈ ಮಂಡಳದ ಅಧ್ಯಕ್ಷರಿಗೆ ರಾಜಪ್ರಮುಖನೆಂದು ಕರೆಯಲಾಗುವದು. ಸಂಸ್ಥಾನಿಕರು ಸರತಿಯಂತೆ ರಾಜ ಪ್ರಮುಖರಾಗಬೇಕು.

ರಾಜಪ್ರಮುಖರಿಗೆ ಆಡಳಿತೆಯಲ್ಲಿ ಸಹಾಯ ಸಲಹೆ ಕೊಡಲು ಒಂದು ಮಂತ್ರಿಮಂಡಳವನ್ನು ನೇಮಿಸಲಾಗುವದು.

### ರಾಜಪ್ರಮುಖನ ಅಧಿಕಾರ

ಮಂತ್ರಿಗಳನ್ನು ನೇಮಿಸುವದು ತಿತ್ತೊಗೆಗೆಯುವದು ಲೋಕ ಸಭೆಯನ್ನು ಕರೆಯುವದು ಅಥವಾ ಮುಂದೆ ಹಾಕುವದು ಅಥವಾ ವಿಸರ್ಜಿಸುವದು, ಹಾಯಕೋರ್ಟ ನ್ಯಾಯಾಧೀಶರನ್ನು ವಿಸರ್ಜಿಸುವದು, ಇತ್ಯಾದಿ ಅಧಿಕಾರಗಳನ್ನು ರಾಜಪ್ರಮುಖನಿಗೆ ಕೊಡಲಾಗುವದು. ಅಲ್ಪವಯಸ್ಸಿನ ಸಂಸ್ಥಾನಿಕನಿಗೆ ಆರ್ಥಿಕ ಸಹಾಯ ಕೊಡುವದು ಇಲ್ಲವೆ ಅವನ ಆಸ್ತಿಪಾಸ್ತಿಯ ರಕ್ಷಣೆಯನ್ನು ವಹಿಸುವ ಕಾರ್ಯವನ್ನು ರಾಜಮಂಡಳವಷ್ಟೇ ವಹಿಸುವದು. ರಾಜ ಪ್ರಮುಖನಿಗೆ (ಈ ಬಗ್ಗೆ) ಹತ್ತುವ ವೆಚ್ಚವು ಕಾಯಿದೆ ಮಂಡಳದ ಮತಾಧೀನ ಉಳಿಯುವದಿಲ್ಲ.

ಸಂಯುಕ್ತ ಸಂಸ್ಥಾನದಲ್ಲಿ ಸೇರಿದ ಎಲ್ಲ ಸಂಸ್ಥಾನಗಳು ಜನಸಂಖ್ಯೆಯ ೧ ಲಕ್ಷಕ್ಕೆ ಒಬ್ಬ ಪ್ರತಿನಿಧಿಯನ್ನು ಆರಿಸಿ ಘಟನಾ ಸಮಿತಿಯನ್ನು ರಚಿಸುವವು. ಸಾಂಗ್ಲಿಗೆ ೬ ಸ್ಥಳಗಳನ್ನು ಮತ್ತು ಇತರ ಸಂಸ್ಥಾನಗಳಿಗೆ ಎರಡೆರಡು ಸ್ಥಳಗಳನ್ನು ಮತ್ತು ಭೋರಕ್ಕೆ ನಾಲ್ಕು ಸ್ಥಳಗಳನ್ನು ಕೊಡಲಾಗುವದು. ಮುಸಲ್ಮಾನ ಹರಿಜನ ಮತ್ತು ಹೆಂಗಸರಿಗೆ ಒಂದು ಸ್ಥಳವನ್ನು ಕಾಯ್ದಿಡಲಾಗುವದು. ಆಯಾ ಸಂಸ್ಥಾನಗಳ ಕಾಯಿದೆ ಮಂಡಳಗಳು ಈ ಪ್ರತಿನಿಧಿಗಳನ್ನು ಆರಿಸತಕ್ಕದ್ದು. ಕಾಯದೆ ಮಂಡಳಗಳು ಇಲ್ಲದ ಸಂಸ್ಥಾನದಲ್ಲಿ ಪ್ರಜಾಪರಿಷತ್ತುಗಳು ಪ್ರತಿನಿಧಿಗಳನ್ನು ಆರಿಸುವವು. ಇವೆರಡೂ ಇಲ್ಲದಲ್ಲಿ ದಕ್ಷಿಣ ಸಂಸ್ಥಾನಗಳ ಪ್ರಾದೇಶಿಕ ಸಭೆಯು ಈ ಕಾರ್ಯ ಮಾಡುವದು. ತಜ್ಞರನ್ನು ಮತ್ತು ಅನುಭವಿಗಳನ್ನು ಸಮಿತಿಯಲ್ಲಿ ಸೇರಿಸಿಕೊಳ್ಳುವ ಅಧಿಕಾರವನ್ನೂ ಕೊಡಲಾಗುವದು.

### ನಡುಗಾಲ ಸರಕಾರ

ಈ ಕರಾರಪತ್ರಕ್ಕೆ ಒಪ್ಪಿಕೊಂಡು ಸಂಸ್ಥಾನಿಕರು ರಾಜಮಂಡಳ ರಚಿಸುವರು ಮತ್ತು ರಾಜ ಪ್ರಮುಖನನ್ನು ಆರಿಸುವರು. ಆಯಾ ಸಂಸ್ಥಾನಗಳ ಕಾಯಿದೆ ಮಂಡಳಗಳ ಕಾರ್ಯವು [ಪ್ರತಿನಿಧಿಗಳನ್ನು ಆರಿಸುವದನ್ನೊಂದು ಬಿಟ್ಟು] ಮುಗಿದಂತಾಗುವದು. ಘಟನಾಸಮಿತಿಯ ಪ್ರಥಮಾಧಿವೇಶನ ಪ್ರಾರಂಭವಾದ ಬಳಿಕ ರಾಜಪ್ರಮುಖನು ಒಂದು ನಡುಗಾಲ ಸರಕಾರವನ್ನು ಸ್ಥಾಪಿಸಬಹುದು. ಘಟನಾ ಸಮಿತಿಯು ನಡುಗಾಲ ಕಾಯಿದೆ ಮಂಡಳವೂ ಆಗುವದು.

ಒಂದು ಹಾಯಕೋರ್ಟನ್ನು ಸ್ಥಾಪಿಸಲಾಗುವದು, ನ್ಯಾಯದಾನ ಸಮಿತಿಯ ಸಲಹೆ ಪ್ರಕಾರ ರಾಜಪ್ರಮುಖನು ನ್ಯಾಯಾಧೀಶರನ್ನು ನೇಮಿಸುವನು.

### ಸಂಸ್ಥಾನಿಕರ ಹಕ್ಕುಗಳು

ಪ್ರತಿಯೊಬ್ಬ ಸಂಸ್ಥಾನಿಕನು ಒಂದು ಸಶಸ್ತ್ರ ರಕ್ಷಕ ಪಡೆಯನ್ನು ಇಟ್ಟುಕೊಳ್ಳಬಹುದು. ವೆಚ್ಚವನ್ನು ಸಂಯುಕ್ತ ಸಂಸ್ಥಾನವು ಕೊಡುವದು. ಈ ವೆಚ್ಚ ಕಾಯಿದೆ ಮಂಡಳದ ಮತಕ್ಕೆ ಒಳಪಡಲಾರದು.

ಈ ಕರಾರಪತ್ರಕ್ಕೆ ಭಂಗ ಬರದಂತೆ ಲೋಕ ಸಭೆಯು ಕೆಲವೊಂದು ವಿಷಯಗಳನ್ನು ಹಿಂದುಸ್ತಾನ ಒಕ್ಕೂಟಕ್ಕೆ ಅಥವಾ ಅದರ ಘಟಕಗಳಿಗೆ ಒಪ್ಪಿಸಬಹುದು.

ಸಂಯುಕ್ತ ಸಂಸ್ಥಾನವು ಏಕಾಂಗವಾಗಿ ಹಿಂದುಸ್ತಾನ ಒಕ್ಕೂಟಕ್ಕೆ ಸೇರಬಹುದು, ಅಥವಾ ಬೇರೆ ಯಾವ ಪ್ರಾಂತಕ್ಕೆ ಅಥವಾ ಸಂಸ್ಥಾನಕ್ಕೆ ಅಥವಾ ಒಕ್ಕೂಟಕ್ಕೆ ಸೇರಬಹುದು.

### ಕನ್ನಡ ಮರಾಠಿ ವಿಭಾಗಗಳು

ಭಾಷಾವಾರ ಮತ್ತು ಆಡಳಿತೆಯ ಅನುಕೂಲತೆಗಾಗಿ ಕನ್ನಡ ಮರಾಠಿ ಎರಡು ವಿಭಾಗಗಳನ್ನು ಕಲ್ಪಿಸಲಾಗುವದು.

ಈ ಕರಾರಪತ್ರಕ್ಕೆ ಐದು ಪರಿಶಿಷ್ಟಗಳು ಜೋಡಿಸಲ್ಪಟ್ಟಿವೆ, ಅವರಲ್ಲಿ ಒಂದು ಸಂಸ್ಥಾನಿಕರ ಖಾಸಗಿ ವೆಚ್ಚದ ಬಗ್ಗೆ ಇದೆ.

ಡಾ. ಪಟ್ಟಾಭಿ ಸೀತಾರಾಮಯ್ಯ ಮತ್ತು ಶ್ರೀ. ಶಂಕರರಾವ ದೇವರಂಥ ಕಾಂಗ್ರೆಸ ವರಿಷ್ಠರು ಈ ಯೋಜನೆಯ ರೂಪರೇಷೆಗಳಿಗೆ ಒಪ್ಪಿಗೆ ಕೊಟ್ಟಿದ್ದಾರೆಂದು ಪ್ರಸಿದ್ಧವಾಗಿದೆ. ಸಂಯುಕ್ತ ಸಂಸ್ಥಾನದಲ್ಲಿ ಸೇರುವ ಸಂಸ್ಥಾನಿಕರು ಕರಾರಪತ್ರಕ್ಕೆ ಬೇಗನೆ ಸಹಿ ಹಾಕಲಿರುವರೆಂದು ತಿಳಿಯುತ್ತದೆ.

### ಜುನಾಗಡಕ್ಕೆ ಸರದಾರ ಪಟೇಲರ ಪ್ರತಿನಿಧಿ

ಹಿಂದುಸ್ತಾನ ಸರಕಾರದ ಸಂಸ್ಥಾನ ಖಾತೆಯ ಓರ್ವ ಹಿರಿಯ ಅಧಿಕಾರಿಯು ಆಗಸ್ಟ ೨೫ ಕ್ಕೆ ದಿನಾಂಕ ಜುನಾಗಡಕ್ಕೆ ಹೋಗಿ ನವಾಬರು ಹಾಗೂ ಜನತಾ ಪ್ರತಿನಿಧಿಗಳೊಡನೆ ಮಹತ್ವದ ವಿಚಾರವಿನಿಮಯ ಮಾಡಲಿರುವನು. ಜುನಾಗಡ ಸಂಸ್ಥಾನವನ್ನು ಪಾಕಿಸ್ತಾನಕ್ಕೆ ಸೇರಿಸಲು ನವಾಬರು ಕೈಕೊಂಡ ನಿರ್ಣಯ ಹಾಗೂ ಅದನ್ನು ಪ್ರತಿಭಟಿಸಲು ಪ್ರಜೆಗಳು ಹೂಡಿದ ಚಳವಳಿಯ ಬಗ್ಗೆ ಮುಖ್ಯವಾಗಿ ಚರ್ಚೆ ನಡೆಯುವದು.

ಕಾಠೇವಾಡ ಸಂಸ್ಥಾನ ಪ್ರಜಾಮಂಡಲಗಳ ಪ್ರತಿನಿಧಿಗಳು ಆ ಅಧಿಕಾರಿಯನ್ನು ಕಂಡು ತಮ್ಮ ಅಭಿಪ್ರಾಯ ಮಂಡಿಸಲಿರುವರು.

ಕಾಠೇವಾಡದಲ್ಲೆಲ್ಲ ಪ್ರಜಾ ಮಂಡಲದ ನೇತೃತ್ವದಲ್ಲಿ ಸಾರ್ವಜನಿಕ ಸಭೆಗಳು ಜರುಗಿ ನವಾಬರ ನಿರ್ಣಯವನ್ನು ನಿಷೇಧಿಸುತ್ತಿವೆ. ಅಲ್ಲದೆ ಜುನಾಗಡದ ಬಂದರವನ್ನು ಬಹಿಷ್ಕರಿಸಿ, ಪ್ರತ್ಯಕ್ಷ ಹೋರಾಟ ಹೂಡಲು ನಿರ್ಣಯಿಸಲಾಗಿದೆ.

ಹಿಂದುಸ್ತಾನ ಸರಕಾರದ ಅಧಿಕಾರಿಯು ಜುನಾಗಡಕ್ಕೆ ಹೋದಾಗ, ಅಲ್ಲಿಯ ನಾಲ್ಕುನೂರು ಹಿಂದು ಜಹಾಗೀರದಾರರ ಅಭಿಮತ ಕೇಳಿಕೊಳ್ಳುವರೆಂದು ತಿಳಿಯುತ್ತದೆ. ಬ್ರಿಟಿಶ್ ಸಾರ್ವಭೌಮಾಧಿಕಾರದ ಲಯದೊಡನೆ ತಮಗೆ ಸ್ವಾತಂತ್ರ್ಯ ದೊರೆತಿರುವದಾಗಿ ಅವರು ಹೇಳುತ್ತಿರುವರಂತೆ.

ಮುಂಬಯಿಯಲ್ಲಿರುವ ಜುನಾಗಡ ಮತ್ತು ಕಾಠೇವಾಡ ಸಂಸ್ಥಾನಗಳ ಪ್ರಮುಖರು ಈ ಚರ್ಚೆಯಲ್ಲಿ ಭಾಗವಹಿಸಲು ಆಗಸ್ಟ ೨೫ ಕ್ಕೆ ರಾಜಕೋಟಕ್ಕೆ ತೆರಳುವರು.

# ಅಂತರರಾಷ್ಟ್ರೀಯ

## ಯುರೋಪಿನ ಆರ್ಥಿಕ ಭವಿತವ್ಯ

ಮಹಾಯುದ್ಧದ ನಂತರ ಯುರೋಪಿನ ಆರ್ಥಿಕ ಪರಿಸ್ಥಿತಿ ಬಹಳ ಮಟ್ಟಿಗೆ ಹದಗೆಟ್ಟಿರುವುದರಿಂದ ಅಮೇರಿಕೆಯ ಸ್ಟೇಟ ಸೆಕ್ರೆಟರಿ ಮಾರ್ಶಲರ ಯೋಜನೆಯನ್ನು ಕಾರ್ಯರೂಪದಲ್ಲಿ ತರಬೇಕೆಂಬ ಯೋಚನೆ ನಡೆದಿದೆ. ಇದು ಕೇವಲ ಆರ್ಥಿಕ ಸಹಾಯವಾಗಿರದೆ ರಾಜಕೀಯ ಕೈವಾಡವೂ ಇದರಲ್ಲಿದೆಂದು ತಿಳಿದು ರಶಿಯ ಮೊದಲಾದ ರಾಷ್ಟ್ರಗಳು ಇದಕ್ಕೆ ತಮ್ಮ ಅಸಮ್ಮತಿಯನ್ನು ವ್ಯಕ್ತಪಡಿಸಿದ್ದುಂಟು. ಈಗ ಕೇವಲ ಹದಿನಾರು ರಾಷ್ಟ್ರಗಳ ಪ್ರತಿನಿಧಿಗಳು ಪ್ಯಾರಿಸಿನಲ್ಲಿ ಕೂಡಿ ಯುರೋಪಿನ ಆರ್ಥಿಕ ಭವಿತವ್ಯದ ಬಗೆಗೆ ವಿಚಾರಮಾಡಿ ಒಂದು ಬಗೆಯ ಒಡಂಬಡಿಕೆಗೆ ಬಂದಂತಾಗಿದೆಂದು ತಿಳಿಯುತ್ತದೆ. ಹದಿನಾರು ರಾಷ್ಟ್ರಗಳ ಪ್ರತಿನಿಧಿಗಳು ಎಲ್ಲ ಪ್ರಶ್ನೆಗಳನ್ನು ಕೂಲಂಕಷವಾಗಿ ವಿಚಾರಿಸಿ ಈ ಆರ್ಥಿಕ ಸಹಕಾರದಲ್ಲಿ ಮೂರು ಮೆಟ್ಟಲುಗಳನ್ನು ಮಾಡಬೇಕೆಂದು ಗೊತ್ತುಪಡಿಸಿದ್ದಾರೆ. ಮೊದಲನೆಯದಾಗಿ ಮಾರ್ಶಾಲ್ ಯೋಜನೆಯನ್ವಯ ಬರುವ ಚಳಿಗಾಲದೊಳಗಾಗಿ ಅಮೇರಿಕೆಯಿಂದ ಸರಕುಗಳು ಬರುವ ಸಂಭವವಿಲ್ಲದ್ದರಿಂದ ಈ ಅವಧಿಯ ವರೆಗಿನ ಕಾಲವು ಬಹಳ ಬಿಕ್ಕಟ್ಟಿನದಾಗಿದೆ. ಅದುದರಿಂದ ಈ ಅವಧಿಯಲ್ಲಿ ಸ್ವಾವಲಂಬಿಗಳಾಗಿ ಅಮೇರಿಕೆಯ ಸಹಾಯವನ್ನಪೇಕ್ಷಿಸದೆ ಬೇಕಾದ ಪದಾರ್ಥಗಳನ್ನು ತಾವೇ ಉತ್ಪಾದಿಸಿಕೊಂಡು ಕೊರತೆಯನ್ನು ಹೋಗಲಾಡಿಸಿಕೊಳ್ಳಬೇಕೆಂದು ಗೊತ್ತಾಗಿದೆ. ಎರಡನೆಯ ಮೆಟ್ಟಲು ಪುನರ್ಯೋಜನೆಯದಾಗಿದೆ. ೧೯೪೮ ನೆಯ ವಸಂತಕಾಲದಿಂದ ಪ್ರಾರಂಭವಾಗಿ ೧೮೫೧ ನೇ ವರುಷದ ಕೊನೆಯ ವರೆಗೆ ಎರಡನೆಯ ಮೆಟ್ಟಲಿನ ಕಾಲವನ್ನಿಟ್ಟುಕೊಳ್ಳಲಾಗಿದೆ. ಈ ಪುನರ್ಯೋಜನೆಯ ಕೆಲಸವು ಕಠಿನವಿದ್ದುದರಿಂದ ಸಮಿತಿಯವರು ಇದಕ್ಕಾಗಿ ಬಹಳ ತಲೆ ಕೆಡಿಸಿಕೊಳ್ಳುತ್ತಿರುವರು. ಕೊನೆಯ ಮೆಟ್ಟಲು ೧೯೫೨ ರಿಂದ ಪ್ರಾರಂಭವಾಗುವದು. ಯುರೋಪಿನ ಆರ್ಥಿಕ ಸಂಘಟನೆಯ ಕಾಲವಿದು. ಈ ರೀತಿಯಾಗಿ ಮೂರು ಅಂಕಗಳನ್ನಾಗಿ ವಿಭಾಗಿಸಿಕೊಂಡು ಯುರೋಪಿನ ೧೬ ರಾಷ್ಟ್ರಗಳ ಪ್ರತಿನಿಧಿಗಳು ಮಹತ್ವದ ವಿಚಾರವನ್ನು ನಡೆಸಿರುವರು. ಜನರಲ್ ಮಾರ್ಶಾಲರಿಗೆ ಒಪ್ಪಿಸುವ ವರದಿಯಲ್ಲಿ ಈ ಪ್ರತಿನಿಧಿಗಳು ಯುರೋಪಿನ ಆರ್ಥಿಕ ಅಭಿವೃದ್ಧಿಗಾಗಿ ಸರ್ವರೀತಿಯಿಂದಲೂ ಪ್ರಯತ್ನಿಸುವುದಾಗಿ ಆಶ್ವಾಸನ ಕೊಡಲಿರುವರೆಂದು ತಿಳಿಯುತ್ತದೆ. ಈ ಮಹತ್ವದ ಕೆಲಸದಲ್ಲಿ ಯಶಸ್ವಿಯಾಗಬೇಕಾದರೆ ಆಯಾ ರಾಷ್ಟ್ರಗಳು ಕೇವಲ ಸ್ವಾರ್ಥದ ಕಡೆಗೆಯೆ ಹೆಚ್ಚು ಗಮನ ಕೊಟ್ಟರೆ ನಡೆಯದು. ತಮ್ಮ ಪೂರೈಕೆಗಳು ಒದಗಿಸಲ್ಪಡಬೇಕು ಮತ್ತು ಎರಡನೆಯವರ ಅಡಚಣಿಗಳು ಹಿಂಗಬೇಕು, ಹೀಗೆ ದ್ವಿವಿಧ ಧೋರಣಗಳನ್ನಿಟ್ಟುಕೊಂಡು ಕಾರ್ಯಪ್ರವೃತ್ತರಾದರೆ ಮಾತ್ರ ಉದ್ದಿಷ್ಟವು ಸಾಧಿಸಿ ಯುರೋಪಿನ ಆರ್ಥಿಕ ಪರಿಸ್ಥಿತಿ ಸುಧಾರಿಸಬಲ್ಲುದು.

## ಬ್ರಿಟನ್ನಿಗೆ ಆರ್ಥಿಕ ಸಹಾಯ

ಬ್ರಿಟನ್ನಿನ ಆರ್ಥಿಕ ಪರಿಸ್ಥಿತಿ ಸದ್ಯದಲ್ಲಿ ಬಹಳ ಕಂಗಾಲಾಗಿದ್ದು ಈ ದುಃಸ್ಥಿತಿಯನ್ನು ದೂರ ಮಾಡಿಕೊಳ್ಳುವುದಕ್ಕಾಗಿ ಬ್ರಿಟಿಶ ಸರಕಾರದವರು ವಿವಿಧ ರೀತಿಯಿಂದ ಪ್ರಯತ್ನಿಸುತಿರುವರು. ಉತ್ಪಾದನೆಯನ್ನು ಹೆಚ್ಚಿಸಿಕೊಳ್ಳಲು ಅವಶ್ಯಕ ಎಲ್ಲ ಯೋಜನೆಗಳನ್ನು ಕೈಕೊಳ್ಳುತಿರುವರು. ಒಕ್ಕಲಿಗರು ಇಂತಿಷ್ಟು ಬೆಳೆಯನ್ನು ಬೆಳೆಯಲೇಬೇಕೆಂದು ಸುಗ್ರೀವಾಜ್ಞೆಯನ್ನು ಹೊರಡಿಸಲಾಗಿದೆ. ಚೈನೀ ಪದಾರ್ಥಗಳನ್ನೆಲ್ಲ ಬಿಟ್ಟುಗೊಡಲು ಜನತೆಯನ್ನು ಕೇಳಿಕೊಳ್ಳಲಾಗಿದೆ. ಅಮೇರಿಕೆಯ ಡಾಲರ ಪ್ರಶ್ನೆಯನ್ನು ಬಗೆಹರಿಸಿಕೊಳ್ಳಬೇಕೆಂಬ ಪ್ರಯತ್ನ ನಡೆದಿದೆ. ದಕ್ಷಿಣ ಆಫ್ರಿಕೆಯ ಸರಕಾರದವರು ೬ ರಿಂದ ೮ ಕೋಟಿ ಪೌಂಡಿನ ವರೆಗೆ ಸಾಲಕೊಡಲು ಮುಂದೆ ಬಂದಿದ್ದಾರೆ. ಈ ಸಾಲದಲ್ಲಿ ಅವರು ಹಣ್ಣು ಮತ್ತು ಆಹಾರ ಪದಾರ್ಥಗಳನ್ನು ಒದಗಿಸಬೇಕೆಂದು ಯೋಚಿಸಿದ್ದಾರೆ. ರೋಖ ಹಣ ಕೊಟ್ಟು ಈ ಪದಾರ್ಥಗಳನ್ನು ಕೊಳ್ಳುವಸ್ಥಿತಿಯಲ್ಲಿ ಬ್ರಿಟನ್ನ ಇರದ್ದರಿಂದ ಉದ್ರಿಯಿಂದ ಈ ಸಾಮಾನುಗಳನ್ನು ಪೂರೈಸಿದ್ದಾದರೆ ಬ್ರಿಟನ್‌ಕ್ಕೆ ಆಹಾರ ಪದಾರ್ಥಗಳೂ ಸಿಕ್ಕಂತಾಗುವುದು, ದಕ್ಷಿಣ ಆಫ್ರಿಕೆಯ ಪದಾರ್ಥಗಳ ಮಾರಾಟವೂ ಆದಂತಾಗುವದು. ಲಂಡನಿಗೆ ಹೋಗಿದ್ದ ದಕ್ಷಿಣ ಆಫ್ರಿಕಾ ಸರಕಾರದ ಶಿಷ್ಟಮಂಡಳದವರು ಬ್ರಿಟಿಶ ಸರಕಾರದ ಗೂಡ ನಡೆಸಿದ ಮಾತುಕತೆಯ ಪರಿಣಾಮವಾಗಿ ಈ ಬಗೆಯ ನಿರ್ಧಾರಕ್ಕೆ ಬರಲಾಗಿದೆ.

## ಇಂಡೋನೇಶಿಯ

ಇಂಡೋನೇಶಿಯದಲ್ಲಿಯ ಪರಿಸ್ಥಿತಿಯನ್ನೂ ಸುಧಾರಿಸಿಲ್ಲ. ಯುದ್ಧ ಯಥಾಪ್ರಕಾರ ಸಾಗಿದೆ. ಆಧುನಿಕ ಶಸ್ತ್ರಾಸ್ತ್ರಗಳಿಂದ ಸನ್ನದ್ಧರಾದ ಡಚ್ಚ ಸರಕಾರದ ಸೈನಿಕರು ಇಂಡೋನೇಶಿಯ ಸ್ವತಂತ್ರ ಸರಕಾರದ ಸೈನ್ಯಕ್ಕೆ ಹಾನಿಯನ್ನುಂಟು ಮಾಡುತಿರುವರು. ಪ್ರಜಾರಾಜ್ಯ ಸೈನಿಕರೂ ಸ್ವಾತಂತ್ರ್ಯ ಸಂರಕ್ಷಣೆಗಾಗಿ ಶಕ್ತಿಮೀರಿ ಪ್ರಯತ್ನಿಸುತಿರುವರು. ಜಾವಾ ಮತ್ತು ಮದುರಾ ದ್ವೀಪಗಳಲ್ಲಿ ಡಚ್ ಸೈನಿಕರು ಭಾರೀ ಪ್ರಮಾಣದಲ್ಲಿ ದಾಳಿಯನ್ನು ನಡೆಸಿರುವರೆಂದು ಸುದಿ ಪ್ರಸಿದ್ಧವಾಗಿದೆ ರಾಜಧಾನಿಯಾದ ಜೋಗ್ಜಕಾರ್ತವನ್ನು ಮುತ್ತಿ ಇಡೀ ಜಗತ್ತಿನಿಂದ ಅದನ್ನು ಬೇರ್ಪಡಿಸುವ ಪ್ರಯತ್ನವನ್ನೂ ಡಚ್ಚ ಸೈನಿಕರು ನಡೆಸಿರುವರು. ರಾಜಧಾನಿಯನ್ನು ಡಚ್ಚರು ಸಮೀಪಿಸುತಿರುವರು ಪ್ರಜಾರಾಜ್ಯದ ಸೇನಾಪತಿ ಸುವುಧರ್ಮರು ಪ್ರಕಟನೆಯೊಂದನ್ನು ಹೊರಡಿಸಿ ಸ್ವಾತಂತ್ರ್ಯವನ್ನು ಕಾಪಾಡಿಕೊಳ್ಳಲು ಜನತೆಯಲ್ಲಿ ಬಿನ್ನವಿಸಿಕೊಂಡಿದ್ದಾರೆ. ಇದೀಗ ಇಂಡೋನೇಶಿಯದ ಪ್ರಶ್ನೆ ಭದ್ರತಾಮಂಡಲದಲ್ಲಿ ಮತ್ತೊಮ್ಮೆ ಚರ್ಚೆಗೆ ಬಂದಿದೆ. ಯುದ್ಧ ನಿಲ್ಲಿಸುವಿಕೆಯ ಮೇಲ್ವಿಚಾರಣೆ ಮಾಡುವದರ ಸಂಬಂಧದಲ್ಲಿ ಭದ್ರತಾಮಂಡಳದಲ್ಲಿ ಒಮ್ಮತವಾಗಲೊಲ್ಲದು. ಅಮೇರಿಕೆಯ ಮಧ್ಯಸ್ಥಿಯ ಸಂಬಂಧದಲ್ಲಿ ರಶಿಯದ ಪ್ರತಿನಿಧಿ ಆಕ್ಷೇಪವೆತ್ತಿ ಹೀಗೆ ಮಾಡುವದೆಂದರೆ ಭದ್ರತಾ ಮಂಡಳವೆ ಯುಕ್ತ ರಾಷ್ಟ್ರ ಸಂಸ್ಥೆಗೆ ಮತ್ತೊಂದು ಪೆಟ್ಟು ಹಾಕಿದಂತಾಗುವದೆಂದು ಅಭಿಪ್ರಾಯ ಪಟ್ಟನು. ಅಮೇರಿಕೆಯ ಪ್ರತಿನಿಧಿಯು ಇದನ್ನು ಪ್ರತಿಭಟಿಸಿದನು. ಕೊನೆಗೆ ಅಮೇರಿಕೆಯ ಸೂಚನೆ ಸ್ವೀಕರಿಸಲಾಯಿತು. ಆದರೆ ಭದ್ರತಾಮಂಡಳದ ಈ ನಿರ್ಣಯದಿಂದ ಇಂಡೋನೇಶಿಯದ ಉಭಯ ಪಕ್ಷಗಳಿಗೂ ಅಸಮಾಧಾನವಾಗಿದೆ. ಭದ್ರತಾಮಂಡಳವು ಹೇಗೆಯೆ ಈ ಪ್ರಶ್ನೆಯನ್ನು ಬಗೆಹರಿಸಲಿ. ಡಚ್ ಸರಕಾರವೇ ಕೊನೆಯ ನಿರ್ಣಯವನ್ನು ಸ್ವೀಕರಿಸಬಲ್ಲದೆಂದು ಡಚ್ಚ ಪ್ರತಿನಿಧಿ ವಾನ್ ಕ್ಲೀಫನ್ಸರು ಅಭಿಪ್ರಾಯ ಪಟ್ಟರು. ತ್ರಯಸ್ಥರ ಮಧ್ಯಸ್ಥಿಗೆ ಈ ಪ್ರಶ್ನೆಯನ್ನು ಒಪ್ಪಿಸದೆ ಭದ್ರತಾಮಂಡಳವು ತಾನೇ ಈ ಕಾರ್ಯವನ್ನು ವಹಿಸಿಕೊಂಡಿದ್ದರೆ ಹೆಚ್ಚು ಒಳಿತಾಗುತ್ತಿತ್ತೆಂದು ಪ್ರಜಾರಾಜ್ಯದ ಪ್ರತಿನಿಧಿ ಡಾ. ಶಹರೀರರು ಅಭಿಪ್ರಾಯ ಪಟ್ಟರು. ಆದರೂ ಭದ್ರತಾಮಂಡಳದವರು ಡಚ್ಚ ಸರಕಾರ ಮತ್ತು ಇಂಡೋನೇಶಿಯ ಪ್ರಜಾ ಸರಕಾರವನ್ನು ಸಮಾನ ದರ್ಜೆಯಲ್ಲಿರಿಸಿದ ಬಗ್ಗೆ ಅವರು ಸಮಾಧಾನವನ್ನು ವ್ಯಕ್ತಪಡಿಸಿರುವರು. ಹಿಂದೀ ಪ್ರತಿನಿಧಿ ಡಾ. ಪಿಳ್ಳೆಯವರೂ ಭದ್ರತಾಮಂಡಳದ ಈ ನಿರ್ಣಯದಿಂದ ಸಮಸ್ಯೆ ಬಗೆಹರಿಯದೆಂಬ ಅಭಿಪ್ರಾಯ ಪಟ್ಟಿದ್ದಾರೆ. ಸಾಮ್ಯವಾದಿ ಫ್ರಾನ್ಸು ತನ್ನ ವಿಶೇಷ ಅಧಿಕಾರವನ್ನುಪಯೋಗಿಸಿ ಏಶಿಯದ ಪ್ರಜಾಸತ್ತಾತ್ಮಕ ಪ್ರಗತಿ ಪಥವನ್ನು ಅಡ್ಡಗಟ್ಟಿದ್ದು ತುಂಬ ಶೋಚನೀಯವಾಗಿದೆಂದು ಅಭಿಪ್ರಾಯಪಟ್ಟಿರುವರು. ಡಚ್ಚ ಮಂತ್ರಿಮಂಡಳದಲ್ಲಿಯೂ ಈ ಸಂಬಂಧದಲ್ಲಿ ಭಿನ್ನಾಭಿಪ್ರಾಯವಾಗಿದೆಂದು ತಿಳಿಯುತ್ತದೆ. ಈ ಪ್ರಶ್ನೆಯನ್ನು ಬೇಗ ಬಿಡಿಸಿದಷ್ಟು ಹಿತಕರವಾಗಿದೆ.

## ಚೀನದ ದುಃಸ್ಥಿತಿ

ಚೀನದ ಪರಿಸ್ಥಿತಿಯೂ ಅತ್ಯಂತ ನಿಕೃಷ್ಟವಾಗಿದೆ. ಆಂತರಿಕ ಶಾಂತಿ ಸುವ್ಯವಸ್ಥೆ ಇಲ್ಲದಂತಾಗಿವೆ. ಆರ್ಥಿಕ ಪರಿಸ್ಥಿತಿ ಹದಗೆಟ್ಟುಹೋದ್ದರಿಂದ ಅಮೇರಿಕೆಯ ಧನಸಾಹಾಯವನ್ನು ಚೀನ ಅಪೇಕ್ಷಿಸಹತ್ತಿದೆ. ಈ ಧನಸಹಾಯಕ್ಕಾಗಿ ಆಯಕಟ್ಟಿನ ಸ್ಥಳಗಳನ್ನು ಮಾರಿಕೊಳ್ಳಲು ಸೇನಾಪತಿ ಚಿಯಾಂಗಕೈಶೇಕರು ಸಿದ್ಧರಾಗಿದ್ದಾರೆಂದು ತಿಳಿಯುತ್ತದೆ. ಈ ಆಯಕಟ್ಟಿನ ಸ್ಥಳಗಳನ್ನು ತೆಗೆದುಕೊಂಡು ಚೀನಕ್ಕೆ ೨೦೦ ಕೋಟಿ ಡಾಲರ್ಸ ಸಾಲವನ್ನು ಕೊಟ್ಟು ಚೀನದ ವ್ಯಾಪಾರಾಭಿವೃದ್ಧಿಗೆ ಸಹಾಯಮಾಡಬೇಕೆಂದು ಚಿಯಾಂಗರು ಅಮೇರಿಕೆಗೆ ಕೇಳಿಕೊಂಡಿರುವರೆಂದು ಪ್ರಸಿದ್ಧವಾಗಿದೆ. ಚೀನಕ್ಕೆ ಸೈನ್ಯ ಸಹಾಯವನ್ನೂ ನೀಡಬೇಕೆಂದು ಅಮೇರಿಕೆಗೆ ಕೇಳಿಕೊಳ್ಳಲಾಗಿದೆಯಂತೆ. ಚೀನವು ಆಂತರಿಕ ಅವ್ಯವಸ್ಥೆಗೆ ಆಹುತಿಯಾಗಿ ಇಂತು ಪರಕೀಯ ಸಹಾಯವನ್ನಪೇಕ್ಷಿಸುತಿರುವದು ತುಂಬ ಶೋಚನೀಯ ಸಂಗತಿಯಾಗಿದೆ. ಅಮೇರಿಕೆಯು ಚೀನದಲ್ಲಿ ಈಗಾಗಲೆ ಬೇಕಾದಷ್ಟು ಚಂಚುಪ್ರವೇಶ ಮಾಡಿದೆ. ಆಯಕಟ್ಟಿನ ಸ್ಥಳಗಳು ಅದಕ್ಕೆ ದೊರೆತವೆಂದರೆ ಚೀನಕ್ಕಷ್ಟೇ ಅಲ್ಲ ಇಡೀ ಏಶಿಯ ಖಂಡಕ್ಕೇ ಗಂಡಾಂತರದ ಪ್ರಸಂಗ ಬರಬಹುದು. ಏಶಿಯಖಂಡವು ಆರ್ಥಿಕ ಮತ್ತು ರಾಜಕೀಯ ಗುಲಾಮಗಿರಿಯಲ್ಲಿ ಉರುಳಾಡುವ ಪ್ರಸಂಗ ತಪ್ಪದು. ಅಧ್ಯಕ್ಷ ಟ್ರುಮನ್‌ರ ವಿಶೇಷ ರಾಯಭಾರಿಗಳಾಗಿ ಚೀನಕ್ಕೆ ಬಂದಿರುವ ವ್ಹೊಡ್‌ಮೆಯರರು ಆಂತರಿಕ ಶಾಂತಿಯನ್ನು ಕಾಯ್ದುಕೊಳ್ಳುವದಕ್ಕಾಗಿ ಚೀನದಲ್ಲಿ ರಾಜಕೀಯ ಮತ್ತು ಆರ್ಥಿಕ ಸುಧಾರಣೆಯ ಉಗ್ರೋಪಾಯಗಳನ್ನು ಕೈಕೊಳ್ಳಬೇಕೆಂದು ಸಲಹೆಯಿತ್ತಿದ್ದಾರೆ. ಚೀನದಲ್ಲಿ ಶಾಂತಿಯ ಅವಶ್ಯಕತೆ ಬಹಳಿದೆ. ಆದರೆ ಆ ಶಾಂತಿ ಮತ್ತು ಅಭಿವೃದ್ಧಿಯ ಬಗ್ಗೆ ಎಲ್ಲೆಲ್ಲಿಯೂ ಅನಾದರ ಕಂಡುಬರುತ್ತದೆ. ಶಾಂತಿ ಸುವ್ಯವಸ್ಥೆಯನ್ನು ಕಾಯಿದುಕೊಳ್ಳುವದರ ಬದಲಾಗಿ ಪರಕೀಯರ ಕೈವಾಡ ನಡೆದುದನ್ನು ಟೀಕಿಸುವದರ ಕಡೆಗೇ ಹೆಚ್ಚು ವೇಳೆ ಮತ್ತು ಉತ್ಸಾಹವನ್ನು ವ್ಯಯಮಾಡಲಾಗುತಿದೆಂದು ವ್ಹೊಡ್‌ಮೆಯರರು ಅಭಿಪ್ರಾಯ ಪಡುತ್ತಾರೆ. ಎಲ್ಲೆಲ್ಲಿಯೂ ತಲೆಯೆತ್ತಿದ್ದ ಲಂಚಗುಳಿ ಮತ್ತು ಅಯೋಗ್ಯ ಅಧಿಕಾರಿಗಳನ್ನೆಲ್ಲ ಸರಕಾರದವರು ನಿರ್ಮೂಲ ಮಾಡಬೇಕೆಂದು ಅವರು ಆಗ್ರಹದಿಂದ ಸೂಚಿಸಿರುವರು. ಚೀನದಲ್ಲಿಯ ಕಮ್ಯುನಿಷ್ಟರೂ ಚೀನದ ಸಹಾಯಕ್ಕಾಗಿ ಶಾಂತ ಸಾಧನಗಳನ್ನುಪಯೋಗಿಸಬೇಕೆಂದು ಅವರು ಕೇಳಿಕೊಂಡಿರುವರು. ಅಮೇರಿಕೆಯ ಈ ಪ್ರತಿನಿಧಿಯ ಅಭಿಪ್ರಾಯವನ್ನು ಗ್ರಹಿಸಿದ್ದಾದರೆ ಚೀನದ ಪರಿಸ್ಥಿತಿ ಬಹಳ ಮಟ್ಟಿಗೆ ಹದಗೆಟ್ಟಿದೆಂಬುದು ಸ್ಪಷ್ಟವಾಗುವದು. ಚೀನೀಯರು ಆಂತರಿಕ ಭಿನ್ನಾಭಿಪ್ರಾಯಗಳನ್ನು ಬಿಟ್ಟುಗೊಟ್ಟು ರಾಷ್ಟ್ರದ ಸಾರ್ವಾಂಗಿಕ ಉನ್ನತಿಗಾಗಿ ಒಮ್ಮತದಿಂದ ಪ್ರಯತ್ನಿಸಲು ಸಿದ್ಧರಾಗುವದೆ ಸದ್ಯಕ್ಕೆ ಅವಶ್ಯಕವಾದ ರಾಮಬಾಣ ಉಪಾಯವು.

## ಇಜಿಪ್ತ—ಆಂಗ್ಲ ತೊಡಕು

ಆಂಗ್ಲ ಮತ್ತು ಇಜಿಪ್ತದ ಒಪ್ಪಂದದ ಬಗ್ಗೆ ಉಂಟಾದ ತೊಡಕು ಭದ್ರತಾ ಮಂಡಳದಲ್ಲಿ ಚರ್ಚಿಸಲಾಗುತ್ತದೆ. ಇಜಿಪ್ತ ಬ್ರಿಟನದ ದಾಸ್ಯದಿಂದ ಮುಕ್ತವಾಗಿ ಸಂಪೂರ್ಣ ಸ್ವಾತಂತ್ರ್ಯವನ್ನು ಪಡೆಯಲು ಆತುರವಾಗಿದೆ. ಬ್ರಿಟಿಶರೊಡನೆ ಇಜಿಪ್ಶನ್‌ರು ನೇರವಾಗಿ ವಿಚಾರ ನಡೆಸಿ ಸಮಸ್ಯೆಯನ್ನು ಬಗೆಹರಿಸಿಕೊಳ್ಳಬೇಕೆಂದು ಬ್ರಾಝಿಲ್‌ದ ಪ್ರತಿನಿಧಿ ಭದ್ರತಾ ಮಂಡಳದಲ್ಲಿ ತಂದ ಗೊತ್ತುವಳಿಯನ್ನು ಇಜಿಪ್ತದ ಮುಖ್ಯ ಮಂತ್ರಿ ನೊಕ್ರಾಶಿ ಪಾಶಾರವರು ವಿರೋಧಿಸಿ ಭಾಷಣ ಮಾಡಿದರು. ಇಂಥ ಗೊತ್ತುವಳಿಯನ್ನು ಭದ್ರತಾಮಂಡಲವು ಸ್ವೀಕರಿಸಿದರೆ ಶಾಂತಿಭಂಗದ ಕಾರಣವು ದೂರಾಗಲಾರದೆಂದು ಅವರು ಅಭಿಪ್ರಾಯ ಪಟ್ಟರು. ಸುದಾನದ ಮೇಲಿನ ಬ್ರಿಟಿಶರ ಆಳಿಕೆಯು ಮುಕ್ತಾಯವೆಂದಾಗತಕ್ಕದ್ದು ಎಂಬದರ ನಿರ್ದೇಶವೆ ಈ ಗೊತ್ತುವಳಿಯಲ್ಲಿಲ್ಲದ್ದು ಆಶ್ಚರ್ಯಕರವಾಗಿದೆ. ಬ್ರಿಟಿಶ ಪ್ರತಿನಿಧಿ ಸರ್ ಅಲೆಕ್ಸಾಂಡರ ಕ್ಯಾಡಗನ್‌ರು ಇಜಿಪ್ತ ಮುಖ್ಯ ಮಂತ್ರಿಗಳ ಈ ವಾದವನ್ನು ನಿರಾಕರಿಸಿ ಇಜಿಪ್ತದಲ್ಲಿ ಶಾಂತತಾಭಂಗವಾಗುವ ಪರಿಸ್ಥಿತಿಯಲ್ಲಿಂದೂ ಆಂತರ್ರಾಷ್ಟ್ರೀಯ ರೀತಿನೀತಿಗಳನ್ನು ಅಲ್ಲಗಳೆದು ಇಜಿಪ್ತವೆ ಶಾಂತತಾಭಂಗ ಕೈಕೊಂಡರೆ ಆ ಮಾತು ಬೇರೆ ಎಂದೂ ಅಭಿಪ್ರಾಯಪಟ್ಟಿರುವರು. ಸುದಾನ ಪ್ರಜೆಗಳ ಸ್ವಯಂ ನಿರ್ಣಯಾಧಿಕಾರವನ್ನು ಒಪ್ಪಲು ಇಜಿಪ್ತ ಸಿದ್ಧವಿಲ್ಲೆಂದೂ ಆ ಸ್ವಯಂನಿರ್ಣಯಾಧಿಕಾರಕ್ಕಾಗಿ ಹೋರಾಡುತಿದ್ದೇವೆಂದು ಮುಂತಾಗಿ ಅಲೆಕ್ಸಾಂಡರರು ಹೇಳಿದರು. ಹೀಗಾಗಿ ಆಂಗ್ಲ ಇಜಿಪ್ತ ಒಪ್ಪಂದದ ಸಮಸ್ಯೆಯು ಬಹಳ ಜಟಿಲವಾಗುತ್ತಿದೆ ಹಳೆಯ ಒಡಂಬಡಿಕೆಯನ್ನು ಮುಂದೆ ಮಾಡಿ ಬ್ರಿಟಿಶರು ತಮ್ಮ ಆಧಿಪತ್ಯವನ್ನು ಸಡಲಿಸಲು ಸಿದ್ಧರಿಲ್ಲ. ಆದರೆ ಸದ್ಯದ ಪರಿಸ್ಥಿತಿಯಲ್ಲಿ ಹಳೆಯ ಒಡಂಬಡಿಕೆ ಎಷ್ಟರಮಟ್ಟಿಗೆ ಕಾರ್ಯಕಾರಿಯಾಗಬಲ್ಲದೆಂಬುದು ವಿವಾದಾಸ್ಪದವಾಗಿದೆ. ಈ ಪರಿಸ್ಥಿತಿಯಲ್ಲಿ ಬ್ರಿಟಿಶರು ಇಜಿಪ್ತದಲ್ಲಿಯ ತಮ್ಮ ಸೈನ್ಯವನ್ನು ಹಿಂತೆಗೆದುಕೊಂಡು ರಾಷ್ಟ್ರಸಂಘದ ಸನದಿಗೆ ಮನ್ನಣೆ ಕೊಟ್ಟು ಆ ರಾಷ್ಟ್ರಕ್ಕೆ ಸಂಪೂರ್ಣ ಸ್ವಾಯತ್ತತೆಯನ್ನು ಕೊಟ್ಟು ಪರಿಸ್ಥಿತಿಯನ್ನು ಶಾಂತಗೊಳಿಸುವದು ಕ್ರಮಪ್ರಾಪ್ತವಾಗಿದೆ.

## ಜಪಾನದ ಭವಿತವ್ಯ

ಜಪಾನ ಶಾಂತಿ ಒಡಂಬಡಿಕೆಯ ಮಾತುಕತೆಗಳು ಕ್ಯಾನ್‌ಬೆರಾದಲ್ಲಿ ನಡೆದಿವೆಯಷ್ಟೆ. ಈ ಮಾತುಕತೆಗಳಲ್ಲಿ ಭಾಗ ವಹಿಸಲು ಹಿಂದುಸ್ತಾನ ಮತ್ತು ಪಾಕಿಸ್ತಾನ ಸಾಮಂತ ಸರಕಾರಗಳ ಪ್ರತಿನಿಧಿಗಳೂ ಹೋಗಿರುವರು. ಜಪಾನದ ಭವಿತವ್ಯವೇನು ಎಂಬದನ್ನು ನಿರ್ಧರಿಸುವದೆ ಈ ಪರಿಷತ್ತಿನ ಮುಖ್ಯ ಕಾರ್ಯವೆಂದು ಹೇಳಬಹುದಾಗಿದೆ. ಕಳೆದ ಮಹಾಯುದ್ಧದ ಪೂರ್ವದಲ್ಲಿ ಮತ್ತು ಮಹಾಯುದ್ಧದ ಕಾಲದಲ್ಲಿಯೂ ತನ್ನಸಾಮ್ರಾಜ್ಯವನ್ನು ಬಹಳವಾಗಿ ಬೆಳೆಸಿಕೊಂಡು ಜಪಾನವು ಇಡೀಜಗತ್ತಿನಲ್ಲಿಯೆ ಮೊದಲವರ್ಗದ ರಾಷ್ಟ್ರವಾಗಬಹುದೆಂಬ ಆಸೆ ಅವರಿಗೆ ಇದಿತು. ಆದರೆ ಯುದ್ಧದಲ್ಲಿ ಪರಾಜಯ ಹೊಂದಿದ್ದರಿಂದ ಜಪಾನದ ಆಶೆಯಲ್ಲ ಮಣ್ಣುಗೂಡಿತು. ಅದರ ರಾಕ್ಷಸೀ ಮಹತ್ವಾಕಾಂಕ್ಷೆಗೆ ಆರೆದಾಳ ಬಿದ್ದಿತು. ಅದರೀಗೆ ಅದರ ಭವಿತವ್ಯವನ್ನೆ ನಿರ್ಣಯಿಸಲು ಕಾಮನ್‌ವೆಲ್ಥ ರಾಷ್ಟ್ರಗಳು ಸಿದ್ಧವಾಗಿವೆ. ಜಪಾನವು ಸಾಮ್ರಾಜ್ಯ ಮೋಹವನ್ನೆಲ್ಲ ಬಿಟ್ಟುಗೊಟ್ಟು ಕೇವಲ ತನ್ನ ದ್ವೀಪದ ಮಟ್ಟಿಗೆ ಪರಿಮಿತವಾಗಿರತಕ್ಕದ್ದು. ಆದರೆ ಅದೇ ಕಾಲಕ್ಕೆ ಜಪಾನವು ದರಿದ್ರರಾಷ್ಟ್ರವಾಗುಳಿದು ಎರಡನೆಯವರ ಮೇಲೆ ಭಾರವಾಗುಳಿಯಬಾರದು; ಎಂಬದಾಗಿ ಬ್ರಿಟನದ ಸ್ಟೇಟ ಸೆಕ್ರೆಟರಿಗಳಾದ ಲಾರ್ಡ ಆ್ಯಡಿಸನ್ನರು ಈ ಸಭೆಯಲ್ಲಿ ಅಭಿಪ್ರಾಯ ಪಟ್ಟರು. ಅದು ತನ್ನ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಿಕೊಳ್ಳಬೇಕೆಂದೂ ಅವರಅಭಿಪ್ರಾಯ. ಜಪಾನದ ಶಾಂತಿ ಒಪ್ಪಂದದ ಕರಾರನ್ನು ಬರಿ ನಾಲ್ಕು ಪ್ರಮುಖ ರಾಷ್ಟ್ರಗಳುಬರೆಯದೆ ಜಪಾನಯುದ್ಧದಲ್ಲಿ ನೇರವಾಗಿ ಸಂಬಂಧವಿದ್ದವರೆಲ್ಲರೂ ಅದರಲ್ಲಿ ಭಾಗ ವಹಿಸಬೇಕೆಂದು ಆಸ್ಟ್ರೇಲಿಯದ ಪ್ರತಿನಿಧಿ ಹೇಳಿದ್ದನ್ನೂ ಲಾರ್ಡ ಆ್ಯಡಿಸನ್‌ರು ಒಪ್ಪಿದರು. ಜಪಾನದ ಭವಿತವ್ಯದ ಬಗ್ಗೆ ಒಂದು ಬಗೆಯ ಸಾಮಾನ್ಯ ತಿಳುವಳಿಕೆಗೆ ಬರುವದಕ್ಕಾಗಿ ಈ ಪರಿಷತ್ತನ್ನು ಕರೆಯಲಾಗಿದೆ. ವಾಶಿಂಗ್ಟನದಲ್ಲಿ ಕೂಡಲಿರುವ ಹನ್ನೊಂದು ರಾಷ್ಟ್ರಗಳ ಪರಿಷತ್ತಿನ ಪೂರ್ವಪೀಠಿಕೆಯಿದೆಂದು ಹೇಳಬಹುದು. ಸಾಲ ಪರಿಹಾರದ ಯೋಜನೆ, ಜಪಾನದ ಔದ್ಯೋಗಿಕ ಉತ್ಪಾದನೆಯ ಪರಿಮಿತಿ ಮತ್ತು ಜಪಾನ ವ್ಯಾಪಾರದ ಅಭಿವೃದ್ಧಿ ಮೊದಲಾದ ವಿಷಯಗಳು ಮತಭೇದದ ವಿಷಯವಾಗಿದ್ದು ಇದೆಲ್ಲವನ್ನು ಕಾಮನ್‌ವೆಲ್ಥ ರಾಷ್ಟ್ರಗಳು ಬಿಡಿಸಬೇಕಾಗಿದೆ.

## ಡಾಲರಿನ ಬಿಸ್ಕತ್ತು

ಯುದ್ಧ ಮುಗಿದಂದಿನಿಂದ ಬೆಳೆಸುತ್ತಿದ್ದ ಡಾಲರಿನ ಬಿಸ್ಕತ್ತು ಈಗ ಸಾಕ್ಷಾತ್ತಾಗಿ ಎದುರು ನಿಂತಿದೆ. ಇದು ಅನಿವಾರ್ಯವೆಂಬುದರಲ್ಲಿ ಯಾರೂ ಭಿನ್ನಾಭಿಪ್ರಾಯಪಡರು. ಯುದ್ಧಕಾಲದಲ್ಲಿ ಅಮೇರಿಕದ ಕಡ—ಒತ್ತೆಯ ಸಹಾಯದ ದೆಸೆಯಿಂದ ಬ್ರಿಟನ್ನು ಯುದ್ಧಪೂರ್ವ ಮಹಾಪ್ರಭುತ್ವದ ನಿಶಾನಿಯೇ ಇತ್ತು. ಆದರೆ ಪ್ರಸ್ತುತ ಸಮಸ್ಯೆಯನ್ನು ಚೆನ್ನಾಗಿ ಪರಿಶೀಲಿಸಿದರೆ ಇದಕ್ಕೆ ಆರ್ಥಿಕ ಕಾರಣಗಳಿಗಿಂತ ಹೆಚ್ಚಾಗಿ ರಾಜಕೀಯ ಕಾರಣಗಳೇ ಮಹತ್ವದವಾಗಿವೆಯೆಂಬುದು ಕಂಡು ಬರದಿರದು.

### ಆದಾಯಕ್ಕಿಂತ ಹೆಚ್ಚು ವೆಚ್ಚ

ಬ್ರಿಟನ್ನು ಈಗ ಆದಾಯಕ್ಕಿಂತ ೫೦ ಕೋಟಿ ಪೌಂಡುಗಳಷ್ಟನ್ನು ಹೆಚ್ಚು ವೆಚ್ಚ ಮಾಡಿ ಬದುಕುತ್ತಿದೆ. ಇದಕ್ಕೆ ಮೂರು ಕಾರಣಗಳಿವೆ: ಸನಾತನ ಕಾಲದಲ್ಲಿ ಬ್ರಿಟನ್ನು ಪರದೇಶಗಳಲ್ಲಿ ಹಾಕಿದ ಬಂಡವಾಳವು ಯುದ್ಧಕಾಲದಲ್ಲಿ ಕರಗಿ ಹೋದುದು; ಯುದ್ಧಕಾಲದ ದಾಳಿಗಳಿಂದ ಸಂಪೂರ್ಣವಾಗಿ ಬ್ರಿಟನ್ನಿನ ಕೈಗಾರಿಕೆಯ ಕೇಂದ್ರಗಳು ವಿನಾಶವಾಗಿರುವದರಿಂದ ತಲೆ ಕೆಳಗೆ ಮಾಡಿನಿಂತರೂ ಯುದ್ಧಪೂರ್ವದ ಉತ್ಪಾದನದ ಮಟ್ಟಕ್ಕೆ ಇಂದು ಬಂದು ಮುಟ್ಟಲು ಸಾಧ್ಯವಾಗದುದು; ಮೂರನೆಯದಾಗಿ, ಬ್ರಿಟನ್ನು ಸಂಪೂರ್ಣವಾಗಿ ಆಯಾತಗಳ ಮೇಲೆ ಅವಲಂಬಿಸಿರಬೇಕಾಗಿಬಂದ ಪರಿಸ್ಥಿತಿ.

### ಕಚ್ಚಾ ಮಾಲುಗಳ ಅಭಾವ

ಯುದ್ಧಪೂರ್ವದಲ್ಲಿ ಬ್ರಿಟನ್ನು ಸಾಮ್ರಾಜ್ಯದಲ್ಲಿ ಬಂಡವಾಲ ಹಾಕಿ ಬೇಕು ಬೇಕಾದ ಕೈಗಾರಿಕೆಯನ್ನು ಪ್ರಾರಂಭಿಸಿ ಅದರಿಂದ ಬಂದ ಲಾಭ, ಬಡ್ಡಿ ಇತ್ಯಾದಿಗಳಿಂದ ತನಗೆ ಬೇಕಾದುದನ್ನು ಕೊಂಡು ಜಗತ್ತಿನಲ್ಲಿ ಅತ್ಯುಚ್ಚ ಮಾದರಿಯಲ್ಲಿ ೨ನೆಯ ವರ್ಗಕ್ಕೆ ಬರುವ ಜೀವನ ಮಟ್ಟದಲ್ಲಿ ಸುಖವಾಗಿ ಕಾಲಹಾಕುತ್ತಿತ್ತು. ಈಗ ಯುದ್ಧದಿಂದ ಅದರ ವರ್ಚಸ್ಸಿರುವ ಪರದೇಶಗಳೂ ನಷ್ಟಹೊಂದಿ ಅಲ್ಲಿಗೆ ಮೊದಲು ಕಳುಹುತ್ತಿದ್ದ ಪರಿಮಾಣದ ಕಚ್ಚಾ ಮಾಲುಗಳನ್ನು ಕಳುಹಿಸಲಾರದವಾಗಿರುವದರಿಂದ ಬ್ರಿಟನ್ನಿನ ಕೈಗಾರಿಕೆಯ ಉತ್ಪಾದನ ಇಳಿದುಹೋಗಿ ನಿರ್ಯಾತ ಬಲದಿಂದ ಡಾಲರ್ ಸಂಪಾದಿಸಲು ಅಸಮರ್ಥವಾಗಿ ಬಿಟ್ಟಿದೆ. ಮಾರುವ ಶಕ್ತಿ ಕಡಿಮೆಯಾಗಿ ಕೊಳ್ಳುವ ಶಕ್ತಿಯೂ ಇಳಿದುಹೋಯಿತು; ಆದರೆ ಕೊಳ್ಳುವ ಅವಶ್ಯಕತೆಗಳು ಹೆಚ್ಚುತ್ತ ಹೋಗಿವೆ. ಒಂದು ವಿಚಾರ: ಎಲ್ಲ ಸಾಮಗ್ರಿಗಳ ಮೇಲೂ ಅತ್ಯುಗ್ರ ನಿಯಂತ್ರಣವಿದ್ದು ಜೀವನ ಕ್ರಮದಲ್ಲಿ ವರ್ಗಭೇದವಳಿದು ಹೋಗಿದ್ದರೂ ಬ್ರಿಟನ್ನಿನ ಜೀವನ ಮಟ್ಟವು ಈಗಲೂ ಜಗತ್ತಿನಲ್ಲಿ ಮೇಲ್ತರಗತಿಯ ೨ನೆಯ ವರ್ಗದ್ದಾಗಿಯೇ ಉಳಿದಿದೆಯೆಂಬುದನ್ನು ಲಕ್ಷ್ಯದಲ್ಲಿಡತಕ್ಕದ್ದು.

ಇದರ ಮೇಲೆ, ಯುದ್ಧ ಪೂರ್ವದಲ್ಲಿ ಸಮ್ರಾಟ ಪದವಿಯಲ್ಲಿದ್ದ ಬ್ರಿಟನ್ನು ರಾಜಕೀಯವಾಗಿ ಕುಸಿತಕ್ಕೆ ಸಿಕ್ಕಿದ್ದು, ಔದ್ಯೋಗಿಕ ದೃಷ್ಟಿಯಲ್ಲಿ ಬಹಳ ಹಿಂದುಳಿದ ಅನೇಕ ಒಕ್ಕಲುತನದ ದೇಶಗಳಿಂದ ಕಚ್ಚಾ ಮಾಲನ್ನು ಅಗ್ಗವಾಗಿ ಕೊಂಡು ಅವುಗಳಿಗೆ ಯಾಂತ್ರಿಕ ಸಂಸ್ಕಾರ ಕೊಟ್ಟು ಪಕ್ಕಾ ಮಾಡಿ ತನಗನುಕೂಲವಾಗಿ ಮೊದಲೇ ಮಾಡಿಕೊಂಡಿದ್ದ ಕರಾರುಗಳಂತೆ ಹೆಚ್ಚು ಬೆಲೆಗೆ ಮಾರಿ ಅಪಾರ ಸಂಪಾದನೆಯನ್ನು ಮಾಡುತ್ತಿದ್ದು ತನ್ನ ಸಾಮ್ರಾಜ್ಯದ ನಾನಾ ಭಾಗದ ಸೈನ್ಯ ಕೇಂದ್ರಗಳ ವೆಚ್ಚಕ್ಕಾಗಿ ೧೫ ಕೋಟಿ ಪೌಂಡುಗಳನ್ನು ಖರ್ಚುಮಾಡಲು ಶಕ್ತವಾಗಿತ್ತು. ಈಗ ಆಗ್ನೇಯ ಏಶಿಯದ ಬರ್ಮಾ, ಇಂಡೋನೇಶಿಯಾ, ಮುಂತಾದ ರಣರಂಗವಾಗಿದ್ದ ಸ್ಥಳಗಳಿಂದ ಅಕ್ಕಿ, ರಬ್ಬರ್ ಮುಂತಾದ ವಸ್ತುಗಳ ಆಯಾತಕ್ಕೆ ಅವಕಾಶವಿಲ್ಲದಂತಾಗಿದ್ದಲ್ಲದೆ ಮೊದಲಿನ ೧೫ ಕೋಟಿಗಳ ಜೊತೆಗೆ ೮ ಕೋಟಿ ಪೌಂಡುಗಳನ್ನು ತನಗೆ ಸೇರಿದ ಜರ್ಮನಿಯ ವಿಭಾಗದ ಆಡಳಿತಕ್ಕಾಗಿ ಖರ್ಚುಮಾಡಬೇಕಾಗಿ ಬಂದು ಬ್ರಿಟನ್ನು ಹೈರಾಣಾಗಿ ಹೋಗಿದೆ.

### ಬ್ರಿಟನರ ವಚನ ಭಂಗ

ಯುದ್ಧ ಮುಗಿದಕೂಡಲೆ ಅಕಸ್ಮಾತ್ತಾಗಿ ಕಡ—ಒತ್ತೆಯ ಮೇರೆಗೆ ಸಹಾಯವೊದಗಿಸುವುದನ್ನು ಅಮೇರಿಕವು ನಿಲ್ಲಿಸಿದುದರಿಂದ ಬ್ರಿಟನ್ನು ರಾಜಕೀಯ ಕಾರಣಗಳನ್ನು ಮುಂದಿಟ್ಟು ರಶಿಯದ ಗುಮ್ಮನನ್ನು ಎತ್ತಿ ಎದುರಿಗೆ ಹಿಡಿದು, ಆ ಕಾರಣದಿಂದ ತಾನು ಪ್ರಬಲವಾಗಿರುವುದು ಅಗತ್ಯವೆಂದು ಸಾಧಿಸಿದ್ದಲ್ಲದೆ ಅನಿರ್ಬಂಧವಾಗಿ ತನ್ನ ಸ್ಟರ್ಲಿಂಗನ್ನು ವಟಾಯಿಸಬಹುದೆಂಬ ಅಶ್ವಾಸನವಿತ್ತು ಅಮೇರಿಕದಿಂದ ನಾನೂರು ಕೋಟಿ ಡಾಲರುಗಳನ್ನು ಸಾಲವಾಗಿ ತೆಗೆದುಕೊಂಡಿತು. ಆ ಮೊಬಲಗು ಸಾಮಾನುಗಳ ಬೆಲೆ ಏರಿದ್ದರಿಂದ ಯುದ್ಧಪೂರ್ವದ ಆರ್ಥಿಕ ಮಟ್ಟಕ್ಕೆ ಏರಲು ಸಾಲದಾಯಿತು. ಅದರಲ್ಲಿ ಹೆಚ್ಚಿನ ಅಂಶವನ್ನು ತಮ್ಮ ನಿತ್ಯ ಬಳಕೆಗೆ ಬೇಕಾದ ಆಹಾರ ಧಾನ್ಯ, ಹೊಗೆಸೊಪ್ಪು ಮತ್ತು ಇತರ ವಸ್ತುಗಳನ್ನು ಕೊಳ್ಳಲು ಬಳಸಬೇಕಾಗಿ ಬಂದು ಕೈಗಾರಿಕೆಯ ಉದ್ಯಮಗಳಿಗಾಗಿ ಅದರಲ್ಲಿ ನೂರಕ್ಕೆ ೨೦ರಷ್ಟನ್ನು ಮಾತ್ರ ಕಚ್ಚಾ ಮಾಲು ಹಾಗೂ ದೊಡ್ಡ ದೊಡ್ಡ ಯಂತ್ರೋಪಕರಣಗಳನ್ನು ಕೊಳ್ಳಲು ವಿನಿಯೋಗಿಸುವಂತಾಯಿತು. ಇದರಿಂದ ಅಮೇರಿಕದಿಂದ ಹೆಚ್ಚು ಹೆಚ್ಚಾಗಿ ಆಹಾರವಸ್ತುಗಳನ್ನು ತರಿಸಿಕೊಳ್ಳಬೇಕಾಯಿತು. ಅಲ್ಲಿಯ ವ್ಯಾಪಾರಿಗಳು ಸ್ಟರ್ಲಿಂಗ ಶಿಲುಕನ್ನು ವಟಾಯಿಸಬೇಕೆಂದು ಒತ್ತಾಯಪಡಿಸತೊಡಗಿದರು. ಆದರೆ ಕೈಯಲ್ಲಿರುವ ಹಣ ಕಳೆದುಕೊಂಡರೆ ಹೊಸ ಕೈಗಾರಿಕೆಗಳನ್ನು ಪ್ರಾರಂಭಿಸಲು ಬಂಡವಾಳವಿಲ್ಲದಾಗಬಹುದೆಂದು ಹೆದರಿ ಬ್ರಿಟನ್ನು ತನ್ನ ಮಾತಿಗೆ ತಪ್ಪಿ ಸ್ಟರ್ಲಿಂಗ ಪರಿವರ್ತನೆಯನ್ನು ತಾತ್ಕಾಲಿಕವಾಗಿ ನಿಲ್ಲಿಸಿದೆ. ಇದಲ್ಲದೆ ಅಮೇರಿಕದೊಡನೆಯೇ ಹೆಚ್ಚಾಗಿ ವ್ಯಾಪಾರ ಮಾಡುವುದಾಗಿಹೇಳಿದ್ದ ಬ್ರಿಟನ್ನು ಈಗ ಅದರ ವರ್ಚಸ್ಸಿಲ್ಲದ ಸ್ಥಳಗಳಲ್ಲೂ ವ್ಯಾಪಾರವನ್ನು ಮೊದಲು ಮಾಡಿದೆ.

### ರಾಜಕೀಯ ಪದಭ್ರಂಶ

ಹೀಗೆ ಯುರೋಪಿನ ಪುನರ್ರಚನೆ ಹಿಂದೆ ಬಿದ್ದು, ವಸ್ತುಗಳ ಬೆಲೆಯೇರಿ, ಬ್ರಿಟಿಶ್ ಸಾಮ್ರಾಜ್ಯ ಒಡೆದು ಹೋಗಿ ಅದರ ಬೇರೆ ಬೇರೆ ಭಾಗಗಳು ಸ್ವತಂತ್ರವಾಗುತ್ತಿದ್ದು ತನ್ನ ರಾಜಕೀಯ ಪ್ರಭುತ್ವ ಗೌಣವಾಗಿ ಹೋದುದನ್ನು ಬ್ರಿಟನ್ನು ತಿಳಿದುಕೊಂಡು ತನ್ನ ಆರ್ಥಿಕೋನ್ನತಿಯನ್ನು ಸಾಧಿಸಿಕೊಳ್ಳಲು ವಚನಭಂಗ ಮಾಡಿದರೂ ಅಲ್ಲಿಯ ಆರ್ಥಿಕ ಯೋಜಕರನ್ನು ಯಾರಾದರೂ ಅಭಿನಂದಿಸಲೇಬೇಕು. ಜೀವನ ಮಟ್ಟವನ್ನು ಕೆಳಗಿಳಿಯಗೊಡದೆ ಕೈಗಾರಿಕೆಗಳ ರಾಷ್ಟ್ರೀಕರಣ ಮುಂತಾದ ಸಾಮ್ಯವಾದೀ ಧೋರಣವನ್ನು ವಹಿಸಿ ಕನ್ಸರ್ವೆಟಿವ್ ಪಕ್ಷದವರಿಂದ ಬೈಸಿಕೊಂಡೂ ಬ್ರಿಟನ್ನು ಇಂದು ತಲೆಯೆತ್ತಿ ಮುಂದೆ ಸಾಗುತ್ತಿರುವುದು ಪ್ರಶಂಸಾರ್ಹವಾದುದು.

ಬಿಕ್ಕಟ್ಟಿನ ಹಿನ್ನೆಲೆ ಹೀಗಿದೆ. ಆರ್ಥಿಕ ದೃಷ್ಟಿಯಿಂದ ಬ್ರಿಟನ್ನು ತನಗೆ ಅಗತ್ಯವಿರುವುದೆಲ್ಲವನ್ನೂ ಪೂರಯಿಸಿಕೊಂಡಿದೆ; ರಾಜಕೀಯ ಸ್ಥಾನ ಕಳೆದುಕೊಂಡು ಅಮೇರಿಕಕ್ಕೆ ಅಲ್ಲಿ ದಾರಿಮಾಡಿ ಕೊಟ್ಟು ತನ್ನ ಗೃಹಕೃತ್ಯದಲ್ಲಿ ತಾನು ನಿರತವಾಗಿದೆ. (ತಜ್ಞರ ಅಭಿಪ್ರಾಯ)

## ಆಂಗ್ಲ ಭಾಷಾ ಮೋಹ

[ಪ್ರೊ. ರಾಮೇಶ್ವರ ದಯಾಲ್‌ದುಬೆ ಯವರ ಲೇಖನವನ್ನು ಅಧರಿಸಿ]

ಲೇ:— ಶ್ರೀ ಸೀತಾರಾಮ ಹೆಗಡೆ, ಧಾರವಾಡ

“ಕ್ವಿಟ್ ಇಂಡಿಯಾ” ಮಂತ್ರ ಪ್ರತಿಯೊಬ್ಬ ಭಾರತೀಯನ ಅಂತರಾತ್ಮನ ವಾಣಿಯಾಗಿತ್ತು. ಆದರೆ ಅದರೊಡನೆಯೇ “ಇಂಗ್ಲೀಷ್ ಮಾತ್ರ ಅಲ್ಲ” ಎಂಬುದೂ ಸೇರಿತ್ತು. ಅರ್ಥಾತ್ ಇಂಗ್ಲೀಷರು ಹೋಗಲಿ, ಇಂಗ್ಲೀಷ್ ಇರಲಿ. ಇದು ಇಂದಿನ ಇಂಗ್ಲೀಷ್ ಪದವೀಧರರಲ್ಲಿ ನೂರಕ್ಕೆ ೯೯ ರಷ್ಟು ಜನರ ಹೃದಯದ ಒಳನಾಡಿ. ಇದು ನಿಜವಾಗಿಯೂ ದುಃಖದ ವಿಷಯ.

ಇದು ಸ್ವಲ್ಪ ವಿಚಿತ್ರ ಸಮಸ್ಯೆಯಾಗಿದ್ದರೂ, ಕಟುವಾಗಿ ಅನಿಸುತ್ತಿದ್ದರೂ ಹದಿನಾರಾಣೆ ಸತ್ಯ ಸಂಗತಿ. ಇದನ್ನು ಸ್ವಲ್ಪ ಮನಗೊಟ್ಟು ವಿಚಾರ ಮಾಡಿದರೆ ಎಂಥವನಿಗೂ ಹೊಳೆಯಬಹುದಾದ ಸಾಮಾನ್ಯ ವಿಷಯ.

ನಮ್ಮ ದೇಶದ ಪ್ರತಿಯೊಂದು ಪ್ರಾಂತ ಭಾಷೆಗಳಲ್ಲಿ ಅನವಶ್ಯಕವಾಗಿ ಇಂಗ್ಲೀಷಿನ ಪ್ರಭಾವ ಹೆಚ್ಚಾಗಿದೆ. ಪ್ರತಿಯೊಂದು ಸಜೀವ ಭಾಷೆಯೂ ಪರಭಾಷೆಯ ಶಬ್ದಗಳನ್ನು ತನ್ನಲ್ಲಿ ಅರಿಸಿಕೊಳ್ಳುವದೆಂಬ ತತ್ವವನ್ನು ಎಲ್ಲ ಭಾಷಾ ತಜ್ಞರೂ ಒಪ್ಪುತ್ತಾರೆ. ಹೊಸ ಶಬ್ದಗಳನ್ನು ತನ್ನದಾಗಿಸಿಕೊಂಡು ಭಾಷೆ ತನ್ನ ಶಬ್ದ ಸಂಪತ್ತನ್ನು ಬೆಳೆಸಿಕೊಳ್ಳುವದು. ಆದರೆ ಇದು ಒಂದು ಪರಿಮಿತಿಯವರೆಗೆ ಮಾತ್ರ ಇರತಕ್ಕದ್ದು. ಎಂದು ಈ ಕಾರ್ಯ ತನ್ನ ಅವಶ್ಯಕತೆಗಿಂತಲೂ ಬೆಳೆಯುವದೋ ಆಗ ಮಾತ್ರ ಚಿಂತೆಗೆ ಗುರಿಯಾಗುವದರಲ್ಲಿ ಸಂಶಯವಿಲ್ಲ.

ಇದಕ್ಕೆ ಪ್ರಚಲಿತ ಶಾಲೆ ‘ಕಾಲೇಜು’ಗಳ ಉದಾಹರಣೆ ಕೊಡಬಹುದು. ಪ್ರತಿದಿನ ಆಡುವ ವಾಕ್ಯಗಳು ನಮ್ಮ ಕರ್ಣಪಟಲಕ್ಕೆ ಅಘಾತಿಸುತ್ತಲೇ ಇರುತ್ತವೆ.

“ಲಾಸ್ಟ ಇಯರ ಕ್ವೆಶ್ಚನ್ ಪೇಪರ ಈ ವರ್ಷಕ್ಕಿಂತ ಈಜಿ ಇದ್ದವು. ಈ ವರ್ಷದ್ದು ಟೂ ಡಿಫಿಕಲ್ಟ ಇದ್ದವು”—ಇದು ಸ್ಕೂಲ ಭಾಷೆಯೆಂದು ಕರೆಯಲ್ಪಡಬಹುದೇ ಹೊರತು ನಿಜವಾದ ಅವರ ತಾಯ್ನುಡಿಯಾಗಲಾರದು.

ಇದು ಆ ಶಾಲೆ ‘ಕಾಲೇಜು’ಗಳಲ್ಲಿ ಅಭ್ಯಸಿಸುವ ವಿದ್ಯಾರ್ಥಿಗಳ ತಪ್ಪೆಂದು ಹೇಳಲಾಗುವದಿಲ್ಲ. ಅವರು ಮನೆಬಿಟ್ಟು ಇಲ್ಲಿ ಬಂದಿರುವದು ಎಲ್ಲ ಕಲಿಯಲಿಕ್ಕೆಂದೇ ಇರುವದು. ಅವರಿಗೆ ಶಿಕ್ಷಣ ಬೋಧಿಸುವ ‘ಪ್ರೊಫೆಸರ’ರು ಇಂಗ್ಲಂಡಿನವರಾಗಿರದಿದ್ದರೂ ಅವರ ಶರೀರದ ಕಣಕಣಗಳಲ್ಲಿ ಇಂಗ್ಲೀಷ್ ವ್ಯಾಪಿಸಿರುವಾಗ ಈ ವಿದ್ಯಾರ್ಥಿಗಳ ತಪ್ಪೇನು? ಗುರುವಿನ ಅನುಕರಣವನ್ನೇ ಶಿಷ್ಯ ಮಾಡಬೇಕಲ್ಲವೇ?

“ಬೇಬಿ ಸ್ವಲ್ಪ ಪೆನ್ ತಾ. ಡ್ರಾಯಿಂಗ ರೂಮಿನ ಟೇಬಲ್ ಮೇಲೆ ಅದೆ.” “ಇಲ್ಲಿ ದೊರೆಯುವ ವೆಜಿಟೇಬಲ್ ಥರ್ಡ್ ಕ್ಲಾಸಿನದ್ದು ಆದರೆ ಫ್ರುಟ್ ಮಾತ್ರ ಒಳ್ಳೆಯದು ಸಿಗುತ್ತದೆ” ಇತ್ಯಾದಿ ಕೆಲ ಉದಾಹರಣೆ ಕೊಡಬಹುದು. ಹಗಲಿರುಳು ವ್ಯವಹಾರದಲ್ಲಿ ಇಂಗ್ಲೀಷ್ ಹಾಸುಹೊಕ್ಕಾಗಿ ಬಿಟ್ಟಿದೆ.

“ಟೇಬಲ್, ವೆಜಿಟೇಬಲ್, ಫ್ರುಟ್” ಮೊದಲಾದ ಶಬ್ದಗಳಿಗೆ ದೇಶೀಯ ಶಬ್ದಗಳಿಲ್ಲವೆಂದಲ್ಲ. ಆದರೆ ಹೆಂಡತಿಯ ಬದಲು “ವೈಫ್,” ಕೆಲಸದ ಬದಲು “ವರ್ಕ” ಎನ್ನುವದರಲ್ಲಿ ಒಂದು ಬಗೆಯ ‘ಮಜಾ’ ಅನ್ನಿಸುತ್ತದಲ್ಲದೆ ಜೊತೆಗೆ ದೊಡ್ಡಸ್ತಿಕೆಯ ಭಾವವೂ ಪ್ರತಿಬಿಂಬಿಸುತ್ತದೆ.

ಶತಮಾನಗಳಿಂದ ದಾಸ್ಯದಲ್ಲಿದ್ದ ದೇಶವು ಈ ರೀತಿಯಿಂದಲೇ ಅಧಃಪತನವನ್ನು ಹೊಂದುತ್ತದೆ. ಅದು ಈ ರೀತಿ ದಾಸ್ಯತ್ವದಲ್ಲುಳಿದು ಅತ್ಯಂತ ಅಜ್ಞಾಪಾಲಕವಾಗಿ ವರ್ತಿಸುವದರಲ್ಲಿಯೇ ತನ್ನ ವೈಭವವೆಂದು ತಿಳಿಯುತ್ತದೆ.

ನಾವು ನಮ್ಮ ನಾಡಿನ ಯಾವದೇ ನಗರದಲ್ಲಿ ನೋಡಿದರೂ ಎಲ್ಲ ಅಂಗಡಿಗಳ “ಬೋರ್ಡ” [ಹೆಸರುಹಲಗೆ] ಇಂಗ್ಲೀಷ್ ಭಾಷೆ ಮತ್ತು ರೋಮನ್ ಲಿಪಿಯಲ್ಲಿಯೇ ಗೋಚರವಾಗುವದು “ಹೇರಕಟಿಂಗ್ ಸಲೂನ್” “ಮೋಡರ್ನ ರೆಸ್ಟೊರೆಂಟ್” “ಟೀ ಸ್ಟಾಲ್” “ನ್ಯೂ ಹೋಟೆಲ್” “ಸ್ವೀಟ ಮೀಟ ಮಾರ್ಟ” “ಕ್ಲಾಥ ಮರ್ಚಂಟ” “ಫ್ರೇಮ್ ಮೇಕರ” ಇನ್ನೂ ಅನೇಕ ಹೆಸರಿನಿಂದ ಮೆರೆಯುತ್ತಿವೆ.

— ೧೩ ನೇ ಪುಟಕ್ಕೆ

## ಘಟನಾ ಸಮಿತಿಯಲ್ಲಿ ಅಧಿಕಾರದಾನ ಸಮಾರಂಭದ ನೋಟಗಳು



ಲಾರ್ಡ ಮೌಂಟ ಬ್ಯಾಟನರು ಘೋಷಣೆ ಓದುತ್ತಿರುವದು. ಅವರ ಬದಿಗೆ ವೇದಿಕೆಯ ಮೇಲೆ ಸತಿ ಮೌಂಟ ಬ್ಯಾಟನ ಮತ್ತು ಡಾ. ರಾಜೇಂದ್ರಪ್ರಸಾದರು ಕುಳಿತಿರುವದನ್ನು ಕಾಣಬಹುದು.



ಘಟನಾ ಸಮಿತಿ ಭವನದ ಮೇಲೆ ರಾಷ್ಟ್ರಧ್ವಜ

ಕರ್ಮವೀರ ಹರಿಜನ ಪುರವಣಿ

# ಆಕಳನ್ನು ಹೇಗೆ ಉಳಿಸಬೇಕು ?

[ಲೇ:— ಮೋ. ಕ. ಗಾಂಧಿ]

ಹಿಂದೂ ಧರ್ಮದಲ್ಲಿ ಆಕಳಿಗಿರುವ ಸ್ಥಾನದ ಬಗೆಗೆ ಮತ್ತು ಹಿಂದೀಯರ ಜೀವನದ ಆರ್ಥಿಕ ವ್ಯವಹಾರದಲ್ಲಿ ಅದಕ್ಕಿರುವ ಸ್ಥಾನವನ್ನು ಕುರಿತು ಅಳವಾದ ಅಜ್ಞಾನವಿದೆ. ಅದೇ ಕಾಲಕ್ಕೆ ವಿದೇಶೀಯರ ಆಳಿಕೆಯಿಂದ ಹಿಂದುಸ್ತಾನವು ಮುಕ್ತವಾಗಿ ಎಲ್ಲರ ಸಮ್ಮತಿಯಿಂದ ಅದು ಇಬ್ಭಾಗವಾಗಿ ಒಂದು ಭಾಗವು ಹಿಂದು ಹಿಂದುಸ್ತಾನವೆಂದೂ ಇನ್ನೊಂದು ಭಾಗವು ಮುಸಲ್ಮಾನ ಹಿಂದುಸ್ತಾನವೆಂದೂ ಅವಾಸ್ತವವಾದ ನಂಬಿಕೆಗೆ ಅವಕಾಶವಿತ್ತಿದೆ. ಎಲ್ಲ ಅಂಧಶ್ರದ್ಧೆಗಳಂತೆ ಹಿಂದು ಹಿಂದುಸ್ತಾನ ಮತ್ತು ಮುಸ್ಲಿಂ ಹಿಂದುಸ್ತಾನವೆಂಬ ನಂಬಿಕೆಯು ಅಳಿದು ಹೋಗುವದು ಕಠಿನ. ಅವರವರ ಬಣ್ಣ ಶ್ರದ್ಧೆಗಳೇನಿದ್ದರೂ ಹಿಂದೀ ಒಕ್ಕೂಟ ಮತ್ತು ಪಾಕಿಸ್ತಾನಗಳು ಆಯಾಯ ಭೂಭಾಗದ ಮಕ್ಕಳೆನ್ನುವವರಿಗೆಲ್ಲ ಸೇರಿದ ಸ್ಥಾನಗಳೆಂಬುದು ವಸ್ತುಸ್ಥಿತಿ.

ಆದರೂ ಮಾತುಬಲ್ಲ ಹಿಂದುಗಳಲ್ಲಿ ಬಹು ಜನರು ಹಿಂದೀ ಒಕ್ಕೂಟವು ಹಿಂದುಗಳದೇ ಎಂಬ ಅಂಧ ಶ್ರದ್ಧೆಗೆ ಅಂಟಿಕೊಂಡಿರುವರು. ಮತ್ತು ಆ ಕಾರಣದಿಂದ ಶಾಸನದ ಮೂಲಕವಾಗಿ ಕೂಡ ಅಹಿಂದುಗಳ ಮೇಲೆಯೂ ತಮ್ಮ ಶ್ರದ್ಧೆಯನ್ನು ಹೇರಬೇಕೆಂದು ಪ್ರತಿಪಾದಿಸುತ್ತಿರುವರು. ಒಕ್ಕೂಟದ ಭಾಗದಲ್ಲಿ ಗೋವಧೆಯನ್ನು ಪ್ರತಿಬಂಧಿಸುವ ಶಾಸನವನ್ನು ಮಾಡುವದಕ್ಕೋಸ್ಕರ ಭಾವನೆಯ ಪ್ರಚಂಡ ತರಂಗವೇ ಎದ್ದಿದೆ.

ಅಜ್ಞಾನಮೂಲಕವಾಗಿದೆಂದು ನಾನು ತಿಳಿದಿರುವ ಈ ಪರಿಸ್ಥಿತಿಯಲ್ಲಿ ಮತ್ತು ಗೋಭಕ್ತಿಯಲ್ಲಿ ಹೆರವರಿಗೆ ಎಂದೂ ಕಡಿಮೆಯವನಲ್ಲೆಂಬ ಅಭಿಮಾನದಿಂದ ಈ ಅಜ್ಞಾನವನ್ನು ನಿವಾರಿಸಲು ಉತ್ತಮರೀತಿಯಲ್ಲಿ ಸಾಧ್ಯವಿದ್ದ ಪ್ರಯತ್ನವನ್ನು ನಾನು ಮಾಡಲೇಬೇಕು.

ಧಾರ್ಮಿಕ ರೀತಿಯಲ್ಲಿ ಗೋಪೂಜೆಯು ಗುಜರಾತ, ಮಾರವಾಡ, ಸಂಯುಕ್ತಪ್ರಾಂತ ಮತ್ತು ಬಿಹಾರದಲ್ಲಿ ಹೆಚ್ಚು ರೂಢವಾಗಿದೆಂಬುದನ್ನು ಮೊದಲೇ ನೆನಪಿನಲ್ಲಿಟ್ಟುಕೊಳ್ಳುವಾ. ಗುಜರಾತಿಗಳು ಮಾರವಾಡಿಗಳು ಸಾಹಸಿಗರಾದ ವ್ಯಾಪಾರಸ್ಥರಾದುದರಿಂದ ಹಿಂದುಸ್ತಾನದ ಗೋಸಂಪತ್ತನ್ನು ಸಂರಕ್ಷಿಸಿಕೊಳ್ಳುವ ಕಠಿನ ಸಮಸ್ಯೆಯನ್ನು ಬಿಡಿಸುವದಕ್ಕೆ ತಮ್ಮ ವ್ಯವಹಾರ ಕುಶಲತೆಯನ್ನು ಉಪಯೋಗಿಸದೆ ಈ ಬಗೆಗೆ ದೊಡ್ಡ ಗಲಭೆಯನ್ನೆಬ್ಬಿಸುವಲ್ಲಿ ಯಶಸ್ವಿಯಾಗಿರುವರು.

ಯಾವ ಧಾರ್ಮಿಕ ಶ್ರದ್ಧೆಯಲ್ಲಿ ಹೆರವರಿಗೆ ನಂಬಿಗೆಯಿಲ್ಲವೋ ಆ ಧಾರ್ಮಿಕ ವಿಧಿಯನ್ನು ಶಾಸನದ ಮೂಲಕ ಎರಡನೆಯವರ ಮೇಲೆ ಹೇರುವದು ತಪ್ಪೆಂಬುದು ಸ್ಪಷ್ಟವಿದೆ.

ಗೋರಕ್ಷಣೆಯು ಶುದ್ಧ ಆರ್ಥಿಕ ಅವಶ್ಯಕತೆಯ ಮಟ್ಟಿಗೆ ಹೇಳುವದಾದರೆ ಅದನ್ನು ಆ ದೃಷ್ಟಿಕೋನದಿಂದಲೇ ನೋಡಿದಲ್ಲಿ ಸಹಜವಾಗಿ ಸಾಧಿಸಿಕೊಳ್ಳಬಹುದು. ಅಂತಹ ಪ್ರಸಂಗದಲ್ಲಿ ಹಳೆಯ ಬರಡು, ಗೊಡ್ಡು ಮತ್ತು ಅವುಗಳ ಪೋಷಣೆಗೆ ಹತ್ತುವ ಖರ್ಚಿಗಿಂತಲೂ ಕಡಿಮೆ ಹಾಲು ಕೊಡುವ ಆಕಳುಗಳನ್ನು ಎರಡನೇ ವಿಚಾರವಿಲ್ಲದೆ ಕೊಲ್ಲಬೇಕಾಗುವದು. ಪರಸ್ಪರ ವಿರೋಧಾಭಾಸಗಳ ಈ ದೇಶದ ನಿವಾಸಿಗಳು ಅನೇಕ ಹೃದಯಹೀನಕೃತಿಗಳನ್ನು ಮಾಡುವ ದೋಷಕ್ಕೆ ಗುರಿಯಾಗಿದ್ದರೂ ಅಂತಹ ಹೃದಯಹೀನ ಆರ್ಥಿಕ ಪದ್ಧತಿಗೆ ಈ ನಾಡಿನಲ್ಲಿ ಎಡೆಇಲ್ಲ.

ಹಾಗಾದರೆ ಆಕಳು ಸಾಕಷ್ಟು ಹಾಲು ಕೊಡದಂತಾದರೆ ಅಥವಾ ಬೇರೆ ರೀತಿಯಿಂದ ಗೋ-ಪಾಲನೆಯು ಭಾರವೆನಿಸಿದರೆ ಅದನ್ನು ಕೊಲ್ಲದೆ ಹೇಗೆ ಉಳಿಸಬಹುದು? ಈ ಪ್ರಶ್ನೆಯ ಉತ್ತರವನ್ನು ಹೀಗೆ ಕ್ರೋಢೀಕರಿಸಬಹುದು.

(೧) ಆಕಳು ಮತ್ತು ಅದರ ಕರು ಇವುಗಳ ರಕ್ಷಣೆಯ ಬಗೆಗೆ ಹಿಂದುಗಳು ತಮ್ಮ ಧರ್ಮವನ್ನು ಪರಿಪಾಲಿಸುವದರಿಂದ. ಹಾಗೆ ಅವರು ಮಾಡಿದರೆ ನಮ್ಮ ಗೋಸಂಪತ್ತು ಹಿಂದುಸ್ತಾನಕ್ಕಷ್ಟೇ ಅಲ್ಲದೆ ಜಗತ್ತಿಗೆ ಹೆಮ್ಮೆಯ ಮಾತಾಗಬಲ್ಲದು. ಇಂದಿನ ಪರಿಸ್ಥಿತಿ ಇದಕ್ಕೆ ವಿಪರೀತವಾಗಿದೆ.

(೨) ಧನಗಳ ಸಂಗೋಪನೆಯ ಶಾಸ್ತ್ರವನ್ನು ಚೆನ್ನಾಗಿ ಕಲಿತು ಬದುಕಿಸಬಹುದು. ಆದರೆ ಇಂದು ಮಾತ್ರ ಈ ವಿಷಯದಲ್ಲಿ ಪೂರ್ಣ ಅರಾಜಕತೆಯಿದೆ.

ಕರಡುಬಡಿಯುವ ಈಗಿನ ಕ್ರೂರ ಪದ್ಧತಿಯನ್ನು ಬಿಟ್ಟು ಪಶ್ಚಿಮದ ದೇಶಗಳಲ್ಲಿಯ ದಯಾಮಯ ಪದ್ಧತಿಯನ್ನು ಸ್ವೀಕರಿಸುವದರಿಂದ.

೪) ಹಿಂದುಸ್ತಾನದ 'ಪಾಂಜರಪೋಳ'ಗಳನ್ನು ಪೂರ್ಣ ಸುಧಾರಿಸಿ ಬದುಕಿಸಬಹುದು. ಸದ್ಯಕ್ಕಂತೂ ಈ ಸಂಸ್ಥೆಗಳು ಅಜ್ಞರ ಕೈಯಲ್ಲಿವೆ.

೫) ಅತ್ಯಂತ ಪ್ರಾಥಮಿಕವಾದ ಈ ಕೆಲಸಗಳನ್ನು ಮಾಡಿದರೆ ಮುಸಲ್ಮಾನರು ಹಿಂದು ಬಾಂಧವರ ಸಲುವಾಗಿಯಾದರೂ ತಮ್ಮ ಗೋಮಾಂಸ ಖಾದ್ಯಕ್ಕಾಗಲಿ ಇಲ್ಲವೆ ಇತರ ಕಾರ್ಯಕ್ಕಾಗಲಿ ಆಕಳುಗಳನ್ನು ಕೊಲ್ಲುವದನ್ನು ತಂತಾವೆ ಬಿಟ್ಟುಕೊಡುವರು.

ಮೇಲೆ ಹೇಳಿದ ಅವಶ್ಯಕ ಕಾರ್ಯಗಳ ಹಿಂಬದಿಯಲ್ಲಿ ಅಹಿಂಸೆ ಅಥವಾ ವಿಶ್ವಬಾಂಧವ್ಯವೆಂಬ ಒಂದು ವಸ್ತುವಿರುವದೆಂಬುದನ್ನು ಓದುಗನು ಕಾಣಬಹುದು. ಶ್ರೇಷ್ಠವಾದ ಈ ಮಾತನ್ನು ಅರಿತರೆ ಉಳಿದುದೆಲ್ಲವೂ ಹಗುರಾಗುವದು. ಅಹಿಂಸೆಯಿದ್ದಲ್ಲಿ ಅಪರಿಮಿತತಾಳ್ಮೆಯಿದೆ, ಆಂತರಿಕ ಶಾಂತಿಯಿದೆ, ವಿವೇಕವಿದೆ, ಸ್ವಾರ್ಥತ್ಯಾಗವಿದೆ, ಮತ್ತು ಸತ್ಯಜ್ಞಾನವಿದೆ. ಗೋರಕ್ಷಣೆಯು ಸುಲಭ ಕಾರ್ಯವಲ್ಲ. ಅದರ ಹೆಸರಿನಿಂದ ಅಪರಿಮಿತ ಹಣವು ಹಾಳಾಗುತ್ತಿದೆ. ಆದರೂ ಅಹಿಂಸೆಯ ಅಭಾವದಿಂದ ಹಿಂದುಗಳು ಗೋಪಾಲಕರಾಗುವ ಬದಲು ಗೋಸಂಹಾರಕರಾಗಿರುವೆವು. ಹಿಂದುಸ್ತಾನದಿಂದ ವಿದೇಶೀಯರ ಆಳಿಕೆಯನ್ನು ನಿರ್ಮೂಲಗೊಳಿಸುವದಕ್ಕಿಂತಲೂ ಅದು ಕಠಿನವಾಗಿದೆ.

ಕಲಕತ್ತೆ
೨೨—೮—೪೭

[ಅಡಿಮಾತು: ಹಿಂದುಸ್ತಾನದಲ್ಲಿ ಒಂದು ಆಕಳು ಕೊಡುವ ಹಾಲಿನ ಸರಾಸರಿ ಪ್ರಮಾಣವು ದಿನಕ್ಕೆ ೨ ಪೌಂಡು. ನ್ಯೂಝೀಲಂಡಿನಲ್ಲಿಯ ಆಕಳು ಕೊಡುವ ಹಾಲಿನ ಪ್ರಮಾಣ ದಿನಕ್ಕೆ ೧೪ ಪೌಂಡು. ಇಂಗ್ಲಂಡಿನಲ್ಲಿ ೧೫ ಪೌಂಡು. ಸ್ವಿಟ್ಝರಲಂಡಿನಲ್ಲಿ ೨೦ ಪೌಂಡು, ಹಾಲಿನ ಪ್ರಮಾಣ ಹೆಚ್ಚಿದಂತೆ ಆ ಆ ದೇಶಗಳ ಜನರ ಆರೋಗ್ಯ ಪ್ರಮಾಣವು ಹೆಚ್ಚುತ್ತದೆ.]

# ಧ್ಯೇಯವೊಂದು ಮಾರ್ಗಗಳು ಅನೇಕ

ಮುಸಲ್ಮಾನರ ಮೇಲೆ ವಿಶ್ವಾಸವಿಡುವದೆಂತು ಇದೇ ಒಂದು ವರ್ಷ ನಾವು ಕಟು ಅನುಭವವನ್ನು ಪಡೆದ ನಂತರವೂ ಸುರವರ್ದಿ ಸಾಹೇಬರ ಮೇಲೆ ವಿಶ್ವಾಸವನ್ನೆಂತು ಇಡಬಲ್ಲೆವು ಎಂಬದಾಗಿ ಕಲಕತ್ತೆಯ ಒಂದು ಇಲ್ಲವೆ ಮತ್ತೊಂದು ಭಾಗದಲ್ಲಿ ದಿನಾಲು ಪ್ರಶ್ನೆ ಕೇಳಲಾಗುತ್ತದೆ. ಅದೇ ಪ್ರಶ್ನೆ ಮತ್ತೆ ಮತ್ತೆ ತಲೆಯೆತ್ತುತ್ತದೆ. ಈ ಬಗೆಯ ಭಾವನಾತ್ಮಕ ಮಾರ್ಗವನ್ನು ಬಿಟ್ಟುಗೊಟ್ಟು ರಾಜಕೀಯ ಸಮಂಜಸವೃತ್ತಿಯಿಂದ ವಸ್ತುಸ್ಥಿತಿಯನ್ನು ಕಾಣಬೇಕೆಂದು ಸಭಿಕರ ಮನೋವೃತ್ತಿಯಲ್ಲಿ ಬದಲಾವಣೆ ಮಾಡುವಲ್ಲಿ ಗಾಂಧೀಜಿ ಯಶಸ್ವಿಗಳಾದರು. ಮೊನ್ನೆ ದಿನ ವಿದ್ಯಾರ್ಥಿವೃಂದವನ್ನುದ್ದೇಶಿಸಿ ಭಾಷಣ ಮಾಡುತ್ತ ಗಾಂಧೀಜಿ ಹೀಗೆ ಹೇಳಿದರು. ರಾಜಕೀಯ ಧ್ಯೇಯಕ್ಕಾಗಿ ಅಂದರೆ ಪಾಕಿಸ್ತಾನದ ಸ್ಥಾಪನೆಗಾಗಿ ಮುಸ್ಲಿಂಲೀಗು ಹೋರಾಡುತಿದೆಂಬುದನ್ನು ವಿದ್ಯಾರ್ಥಿಗಳು ನೆನಪಿನಲ್ಲಿಡತಕ್ಕದ್ದು. ಹಿಂದುಸ್ತಾನದ ಇತರ ಭಾಗವು ಈ ವಿಭಜನೆಗೆ ವಿರುದ್ಧವಿರುವದು. ಹಿಂದುಸ್ತಾನವನ್ನು ಅವಿಭಾಜ್ಯ ಇಡುವದೆ ಅದರ ಧ್ಯೇಯ. ಪಕ್ಷಗಳನ್ನು ಉದ್ರೇಕಿಸಲು ಏನೇ ಕಾರಣಗಳಿದ್ದರೂ ಬ್ರಿಟಿಶ ಸರಕಾರವು ಕಾಂಗ್ರೆಸ್ಸು, ಲೀಗು ಮತ್ತು ಶೀಖರು ಎಲ್ಲರೂ ಕೊನೆಗೆ ಹಿಂದುಸ್ತಾನದ ವಿಭಜನೆಗೆ ಒಪ್ಪಿಗೆ ಕೊಟ್ಟರು. ಪಾಕಿಸ್ತಾನವನ್ನು ಪಡೆದನಂತರ ಕಾಯದೇ ಆಜಂ ಜಿನ್ನಾರವರು ಪಾಕಿಸ್ತಾನದಲ್ಲಿ ಮುಸಲ್ಮಾನರಿಗೆಲ್ಲ ಮತ್ತು ಉಳಿದ ಅಲ್ಪಸಂಖ್ಯಾಕರಿಗೆಲ್ಲ ಸಮಾನ ರೀತಿಯಿಂದ ನಡೆಸಿಕೊಳ್ಳಲಾಗುವದೆಂದು ಹೇಳುತಿರುವರು; ಕಾಂಗ್ರೆಸ್ಸೂ ಹೀಗೆಯೇ ಹೇಳುತ್ತದೆ.

ಇದೀಗ ಪಾಕಿಸ್ತಾನ ಮತ್ತು ಅಖಂಡ ಹಿಂದುಸ್ತಾನದ ಹೋರಾಟ ಮುಗಿದುಹೋದ್ದರಿಂದ ಇಂಥ ರಾಜ್ಯದಲ್ಲಿ ಹಿಂದು ಮುಸಲ್ಮಾನರಿಬ್ಬರು ಸಾಮಾನ್ಯ ನಾಗರಿಕರಾಗಿ ಉಳಿಯತಕ್ಕವರು ಎಂಬ ಮಾತನ್ನು ಎಲ್ಲರೂ ತಿಳಿದುಕೊಳ್ಳತಕ್ಕದ್ದು ಎಂದು ಪ್ರತಿಯೊಂದು ಸಭೆಯಲ್ಲಿ ಮತ್ತು ಪ್ರತಿಯೊಂದು ಗುಂಪಿನೊಡನೆ ಮಾತಾಡುವಾಗ ಸಮಯ ಸಿಕ್ಕಾಗೆಲ್ಲ ಗಾಂಧೀಜಿ ಪ್ರತಿಪಾದಿಸುತಿರುವರು. ಯಾರೊಬ್ಬರು ಹಿಂದಿನಂತೆಯೇ ನಡೆದುಕೊಂಡದ್ದಾದರೆ ಅದರಿಂದ ಯಾವ ಸಹಾಯವೂ ಆಗದೆ ತದ್ವಿರುದ್ಧ ನಮ್ಮ ಭಾವೀ ಪ್ರಗತಿಗೆ ಅಡ್ಡಿಯುಂಟಾಗುವದು. ವಸ್ತುಸ್ಥಿತಿಯನ್ನು ನಾವು ಒಪ್ಪಲಿಕ್ಕೆಬೇಕು ಮತ್ತು ಪ್ರತಿಯೊಬ್ಬ ಮನುಷ್ಯನು ಆಯಾ ರಾಜ್ಯದ ಯೋಗ್ಯ ನಾಗರಿಕನಾಗುವಂತೆ ಪ್ರಯತ್ನಿಸಬೇಕು. ಪಾಕಿಸ್ತಾನಕ್ಕಾಗಿ ಹೊಡೆದಾಡಿದ ಮತ್ತು ಕೊನೆಯ ವರೆಗೆ ದಾಸ್ಯದಲ್ಲಿಡಲು ಪ್ರಯತ್ನಿಸಿದ ಹಿಂದೀ ಒಕ್ಕೂಟದಲ್ಲಿಯ ಮುಸಲ್ಮಾನರನ್ನು ಪರದೇಶಿಗರೆಂದು ನಾವು ತಿಳಿದುಕೊಂಡದ್ದಾದರೆ ನಾವು ನಮ್ಮ ರಾಜಕೀಯ ದಿವಾಳಿಯನ್ನೆ ತೆಗೆದವೆಂಬದನ್ನು ಸಿದ್ಧಪಡಿಸುವಲ್ಲಿ ಯಶಸ್ವಿಗಳಾಗುವೆವು. ಇಂದು ಬೇರೆಯವರಿಗಿಂತ ಕಡಮೆ ತರಗತಿಯ ಹಿಂದೀ ಒಕ್ಕೂಟದ ನಾಗರಿಕರು ತಾವಲ್ಲ. ಮುಸಲ್ಮಾನರು ತಾವು ಹಿಂದುಸ್ತಾನದ ನಾಗರಿಕರೆಂಬ ಮಾತನ್ನು ಒಪ್ಪಿಕೊಂಡಿರುವರೆಂಬದನ್ನು ನಾನು ಮೇಲಿಂದ ಮೇಲೆ ತೋರಿಸುತಿರುವೆನು. ಅದಕ್ಕೆ ಸಾಕ್ಷಿ ಬೇಕಾದರೆ ಸುರವರ್ದಿಯವರನ್ನು ಹಿಡಿದು ಕೆಳಗಿನವರೆಲ್ಲರೂ ಜಯಹಿಂದ ಎಂಬದಾಗಿ ಒಳ್ಳೆ ಅಭಿಮಾನದಿಂದ ಘೋಷಿಸುತಿರುವದು.

ಆದರೆ ಮೊನ್ನೆ ದಿನ ನಾಕೆಳಲಡಂಗಾದಲ್ಲಿಯ ಭಾಷಣದಲ್ಲಿ ಗಾಂಧೀಜಿಯವರು ಇದಕ್ಕಿಂತ ಗಂಭೀರವಾದ ವಿಷಯವನ್ನುಲ್ಲೇಖಿಸಿದರು. ಮುಸಲ್ಮಾನರಲ್ಲಿ ಎಲ್ಲವೂ ಸರಿಯಾಗಿ ನಡೆದಿಲ್ಲೆಂಬುದರ ಲಕ್ಷಣಗಳು ಕಾಣಹತ್ತಿವೆಂದು ಅವರು ನುಡಿದರು. ತಾವು ಹೆಚ್ಚು ಸಶಕ್ತರಾಗಿರುವದಾಗಿ ಕೆಲ ಹಿಂದುಗಳು ಈಗ ತಿಳಿಯುತಿರುವರು. ಮತ್ತು ಕೆಲ ಮುಸಲ್ಮಾನರಿಗೆ ತಾವು ಹಿಂದೀ ಒಕ್ಕೂಟದಲ್ಲಿ ಅನರ್ಥವನ್ನನುಭವಿಸಬೇಕಾಗುವದೆಂದೆನಿಸಹತ್ತಿದೆ. ಇದು ಒಳ್ಳೆ ನಾಚಿಕೆಗೇಡು. ನಿಃಸಂಶಯವಾಗಿ ನಾಚಿಕೆಗೇಡು.

— ೧೦ ನೇ ಪುಟಕ್ಕೆ —

# ಹಿಂದೀ ಗವರ್ನರನು

'ಇಂಡಿಯ' ಎಂಬ ಶಬ್ದದ ರಚನೆಯಲ್ಲಿ ಹಿಂದುಸ್ತಾನ ಪಾಕಿಸ್ತಾನಗಳೆರಡೂ ಸೇರುತ್ತವೆ. ಹಿಂದುಸ್ತಾನವೆಂದರೆ, ಸಂಕುಚಿತಾರ್ಥದಲ್ಲಿ, ಹಿಂದುಗಳ ನಾಡೆಂದಾಗಬಹುದು—ಪಾಕಿಸ್ತಾನವು ಮುಸಲಮಾನರ ನಾಡೆಂದಾಗಬಹುದು. ಈ ಮತದಂತೆ ಎರಡು ಬಳಕೆಗಳೂ ಅಕ್ರಮವಾಗಿವೆ. ಆದುದರಿಂದ ನಾನು ಉದ್ದೇಶಪೂರ್ವವಾಗಿ 'ಹಿಂದುಸ್ತಾನ' ಎಂಬ ಶಬ್ದವನ್ನು ಬಳಸ್ಸೇನೆ.

ಕಾಂಗ್ರೆಸ್ಸಿನ ವಿಶೇಷ ಸಭೆಯ ಕಾಲದಲ್ಲಿ ಕಲಕತ್ತದಲ್ಲಿ ೧೯೨೦ ರಲ್ಲಿ ಪಾಸಾದ ಖಿಲಾಫತ್ ಸ್ವರಾಜ್ಯ ಅಸಹಕಾರ ನಿರ್ಣಯವು ಹಿಂದು ಮುಸಲಮಾನರಲ್ಲಿ ಆತ್ಮಶುದ್ಧಿಯನ್ನುಂಟುಮಾಡಿ ಸದಸದ್ವೃತ್ತಿಗಳ ನಡುವೆ ಅಸಹಕಾರ ಉಂಟುಮಾಡಲು ರೂಪಿಸಲ್ಪಟ್ಟುದಾಗಿತ್ತು. ಆದುದರಿಂದ,

೧. ಹಿಂದೀ ಗವರ್ನರನು ತನ್ನಲ್ಲಿ ಮತ್ತು ತನ್ನ ಸುತ್ತುಮುತ್ತಣ ಜನರಲ್ಲಿ ಮದ್ಯಾದಿಗಳ ಸೇವನೆಯ ಆಚರಣೆಯಿಲ್ಲದವನಾಗಿರಬೇಕು. ಅದಿಲ್ಲದಿದ್ದರೆ ಆ ಅಗ್ನಿಗರ್ಭಪೇಯದ ಬಹಿಷ್ಕಾರವು ಏನೆಂದರೂ ಅಕಲ್ಪನೀಯವಾಗಿಯೇ ಉಳಿಯುವದು.

೨. ಅವನ ಮತ್ತು ಅವನ ಸುತ್ತುಮುತ್ತಣ ಇಂದಿನ ಸಮಾಜದ ಅಧಿಪಾಯವಾಗಿ ತೋರುವ ಸಂಘಟಿತ ಹಿಂಸೆಯ ವಿರುದ್ಧ ಹೂಡಿದ ಸಂಘಟಿತ ಅಹಿಂಸೆಯ ಮತ್ತು ಅನ್ನಕ್ಕಾಗಿ ಪಡುವ ಶ್ರಮದ ಹಾಗೂ ಭಾರತದ ಮೂಕ ಕೋಟಿಯೊಡನೆ ಹೊಂದಿದ ಐಕ್ಯದ ಪ್ರತೀಕವಾದ ಕೈನೂಲು ತೆಗೆಯುವ ವಾತಾವರಣವಿರಬೇಕು.

೩. ದಕ್ಷತೆಯಿಂದ ಕೆಲಸಮಾಡಬೇಕಾದರೆ ಅವನು–ಎದ್ದು ಕಾಣುವಂತಿರದಿದ್ದರೂ–ಎಲ್ಲರೂ ಸುಲಭವಾಗಿ ಹೋಗಬಹುದಾದ ಕುಟೀರದಲ್ಲಿ ವಾಸಿಸತಕ್ಕದ್ದು. ಬ್ರಿಟಿಶ ಗವರ್ನರನು ಸ್ವಾಭಾವಿಕವಾಗಿ ಬ್ರಿಟಿಶ ಬಲವನ್ನು ಪ್ರತಿನಿಧಿಸುತ್ತಿದ್ದನು. ಅವನಿಗೂ ಅವನವರಿಗೂ ದೊಡ್ಡ ಕೋಟೆಯ ವಸತಿಗೃಹವನ್ನು ರಚಿಸಲಾಗಿತ್ತು—ಸಾಮ್ರಾಜ್ಯವನ್ನು ಆಧರಿಸಿನಿಂತ ಅವನಿಗೂ ಅವನ ಮಾಂಡಲಿಕರಿಗೂ ಅದೊಂದು ಅರಮನೆಯಾಗಿತ್ತು. ಜಗತ್ತಿನ ರಾಜಾಧಿರಾಜರನ್ನು ಸ್ವಾಗತಿಸಲು ತತ್ಸದೃಶರಾದ ಹಿಂದೀಯರು ಕೆಲ ಮಟ್ಟಿಗೆ ಆಡಂಬರದ ಕಟ್ಟಡಗಳನ್ನು ಇಟ್ಟುಕೊಳ್ಳಬಹುದು. ಇವರಿಗೆ ಗವರ್ನರನ ಅತಿಥಿಗಳಾಗುವುದೆಂಬುದು "ಕೊನೆಯ ವರೆಗೆ ಸಹ" (ಕಡೆಯ ಮಟ್ಟದ ಜೀವನವನ್ನು ಸಹ ನಡೆಸುವದು) ಎಂಬ ಪಾಠವನ್ನು ಕಲಿಸುವಂಥದಾಗಿರಬೇಕು. ಸರ್ವರಿಗೂ ಸಮತೆ—ಎಂಬದು ಸ್ಥೂಲವಾಗಿ ಗೋಚರಿಸಬೇಕು. ಅವನಿಗೆ ಬೆಲೆ ಬಾಳುವ ಹಿಂದೀ ಇಲ್ಲವೆ ಪರದೇಶಿ ಕುರ್ಚಿ ಮೇಜುಗಳು ಇರತಕ್ಕದ್ದಲ್ಲ. ಸರಳ ಜೀವನ ಮತ್ತು ಉದಾತ್ತ ವಿಚಾರ ಎಂಬುದು ಅವನ ಧ್ಯೇಯವಾಗಿರಬೇಕು—ಅದು ಅವನ ದ್ವಾರಾಲಂಕಾರವಾಗಿರುವದಕ್ಕಲ್ಲ, ಜೀವನದಲ್ಲಿ ನಿದರ್ಶನವಾಗಿ ತೋರಿಸಲಿಕ್ಕೆ.

೪ ಯಾವ ರೂಪದ ಅಸ್ಪೃಶ್ಯತೆಯೂ ಅವನಿಗಿಲ್ಲ; ಜಾತೀಯ, ಧರ್ಮದ ಇಲ್ಲವೆ ಬಣ್ಣದ ಭೇದದೃಷ್ಟಿಯಿಲ್ಲ. ಹಿಂದೀಯನಿರಲಿ, ಪಾಶ್ಚಾತ್ಯವಿರಲಿ—ಅವನು ಜಗತ್ತಿನ ಎಲ್ಲ ವಸ್ತುಗಳ, ಧರ್ಮಗಳ ಉತ್ತಮ ಆದರ್ಶಗಳನ್ನು ಪ್ರತಿನಿಧಿಸಬೇಕು. ಹಿಂದೂ ನಾಗರಿಕನಾದ ಅವನು ಪ್ರಪಂಚದ ನಾಗರಿಕನಾಗಿರಬೇಕು. ಈ ಪ್ರಕಾರ ಕಲೀಫ ಉಮರನು ಕೋಟಿಗಟ್ಟಲೆಯ ಸಂಪತ್ತನ್ನು ಕಾಲ ಬದಿಗಿರಿಸಿ ಬಾಳುತ್ತಿದ್ದನೆಂದು ಓದುತ್ತೇವೆ; ಪುರಾತನ ಕಾಲದ ಜನಕ ಮಹಾರಾಜನು ಹೀಗೆ ಬದುಕಿದ್ದನು. ಬ್ರಿಟಿಶ ದ್ವೀಪಗಳ ಶ್ರೀಮಂತರಿಂದಲೂ ಕುಬೇರರಿಂದಲೂ ಸುತ್ತುವರಿಯಲ್ಪಟ್ಟ ಈಟನ್ನಿನ ಉಪಾಧ್ಯಾಯನು, ನಾನು ನೋಡಿದಂತೆ ಹೀಗೆ ವಾಸಿಸುತಿದ್ದನು. ಕ್ಷಾಮಗ್ರಸ್ತರಾದ ಕೋಟಿಗಟ್ಟಲೆ ಜನರ ಹಿಂದೀ ಗವರ್ನರನು ಇದಕ್ಕಿಂತ ಕಡಿಮೆಯಾಗಿ ನಡೆದುಕೊಳ್ಳುವದೆ ?

೫ ಅವನು ತಾನು ಯಾವ ಪ್ರಾಂತದ ಗವರ್ನರನಾಗಿರುವನೋ ಆ ಪ್ರಾಂತದ ಭಾಷೆಯನ್ನು ಮತ್ತು ನಾಗರಿ ಇಲ್ಲವೆ ಉರ್ದು ಲಿಪಿಯಲ್ಲಿ ಬರೆದ ಹಿಂದೀಯ ಅಂತಃಪ್ರಾಂತೀಯ ಭಾಷೆಯಾದ ಹಿಂದುಸ್ತಾನಿಯನ್ನು ಬಳಸುವನು. ಇದು ಸಂಸ್ಕೃತ ಹಿಂದಿಯೂ ಅಲ್ಲ ಪಾರಸೀಕೃತ ಉರ್ದುವೂ ಅಲ್ಲ. ಖಂಡಿತೋಕ್ತಿಯಿಂದ ಹೇಳುತ್ತೇನೆ: ಹಿಂದುಸ್ತಾನಿಯೇ ವಿಂಧ್ಯೋತ್ತರದ ಜನರಾಡುವ ಭಾಷೆ.

ಇದು ಹಿಂದೀ ಗವರ್ನರನಿಗಿರಬೇಕಾದ ಗುಣಗಳ ಸಂಪೂರ್ಣ ಪಟ್ಟಿಯಲ್ಲ. ಇದು ಕೇವಲ ಉಪಲಕ್ಷಣವಷ್ಟೆ. ಹಿಂದೀ ಪ್ರತಿನಿಧಿಗಳು ಅಖಂಡ ಹಿಂದುಸ್ತಾನದ ಹಾಗೂ ಹಿಂದೀ ಮೂಕ ಕೋಟಿಯ ಸೇವೆಗೆ ಪ್ರತಿಜ್ಞಾಬದ್ಧರಾದ ಬ್ರಿಟಿಶ ಗವರ್ನರರು ಹಿಂದೀ ಗವರ್ನರರು ಹೇಗಿರಬೇಕೆಂದು ನಿರೀಕ್ಷಿಸಲ್ಪಡುವುದೋ ಹಾಗೇ ಯಥಾಶಕ್ತಿ ಇರಬೇಕೆಂದು ಯಾರಾದರೂ ಅಪೇಕ್ಷಿಸದಿರರು. ಅಂಥವರು ಭಾರತಕ್ಕೂ ಪ್ರಪಂಚಕ್ಕೂ ಅವರ ದೇಶವು ಕೊಡಬೇಕಾಗಿರುವ ಉತ್ತಮಾದರ್ಶಗಳನ್ನು ಪ್ರತಿನಿಧಿಸುವರು.

( ಗಾಂಧೀಜಿಯಿಂದ )

# ಗಾಂಧೀಜಿಯ ಪ್ರಾರ್ಥನೋತ್ತರ ಭಾಷಣಗಳು

ಬೇಲಿಯಾಘಾಟ, ೧೭—೮—೪೭

## ಬೊಕ್ಕೆಗಳು

ಒಳ್ಳೆಯ ಮಾತುಗಳನ್ನಾಡುವುದು ಶಾಹೀದ ಸಾಹೇಬರಿಗೆ ಚೆನ್ನು. ಆ ಮಾತುಗಳು ನ್ಯಾಯವಾದವು. ಅವರ ಮಾತಿನಲ್ಲಿ ಅತಿಶಯೋಕ್ತಿಯಿದ್ದಿಲ್ಲ. ಆದರೆ ಕೆಲವು ಮನನೋಯಿಸುವ ಸಂಗತಿಗಳತ್ತ ಗಮನ ಸೆಳೆಯುವುದು ನನ್ನ ಕರ್ತವ್ಯವಾಗಿದೆ. ನೀವು ನೋಡುತ್ತಿರುವ ಶ್ರಮ್ಯವಾದ ಹರ್ಷೋತ್ಕರ್ಷದಲ್ಲಿ ಮುಳಗಿ ಹೋಗಬಾರದು. ಕಲಕತ್ತದಲ್ಲಿ ಕೆಲವು ದೂರದ ಪ್ರದೇಶಗಳಿವೆ; ಅಲ್ಲಿ ಎಲ್ಲ ಚೆನ್ನಾಗಿತ್ತೆನ್ನುವಂತಿಲ್ಲ. ಒಂದು ಕಡೆ ಸ್ಥಳಾಂತರ ಹೊಂದಬೇಕಾಗಿ ಬಂದು ಹಾಗೆ ಮಾಡಿದ ಮುಸಲಮಾನ ನಿವಾಸಿಗಳನ್ನು ಹಿಂದುಗಳು ಸ್ವಾಗತಿಸಲು ಸಿದ್ಧರಿದ್ದಿಲ್ಲ. ಇದೆಲ್ಲ ಕೆಟ್ಟದು. ಇಡೀ ದೇಹವೆಲ್ಲ ಚೆನ್ನಾಗಿದೆ, ಆದರೆ ಅದರಲ್ಲಿ ಎಲ್ಲೋ ಒಂದು ಕಡೆಗೆ ಬಂದು ಬೊಕ್ಕೆಯಿದೆ ಎಂಬಂತಾಯಿತು. ಆ ಬೊಕ್ಕೆಯನ್ನು ಯುಕ್ತ ಕಾಲದಲ್ಲಿ ಗುಣ ಪಡಿಸಲು ಪ್ರಯತ್ನಿಸದಿದ್ದಲ್ಲಿ ಅದು ಇಡಿಯ ದೇಹವನ್ನೇ ವಿಷಮಯವಾಗಿ ಮಾಡಬಹುದು.

ಮುಸ್ಲಿಂ ಲೀಗಿನ ಕಾರ್ಯದರ್ಶಿಗಳಾದ ಮಹಮ್ಮದ್ ಹಬೀಬುಲ್ಲಾ, ಬಹಾರ ಎಂಬವರ ಪತ್ರವೊಂದು ನನಗೆ ಬಂದಿದೆ.

ಕಲಕತ್ತದಲ್ಲಿ ಮಾಡಿದ ಒಳ್ಳೆಯ ಕೆಲಸವನ್ನು ಉತ್ತಮ ರೂಪಕ್ಕೆ ತರಲು ಪೂರ್ವ ಪಶ್ಚಿಮ ಬಂಗಾಲಗಳಲ್ಲಿ ವರ್ಚಸ್ವಿಯಾದ ಸಮಿತಿಯೊಂದು ಸಂಚರಿಸಬೇಕೆಂಬ ಯುಕ್ತವಾದ ಸಲಹೆಯನ್ನು ಅದರಲ್ಲಿ ಅವರು ಮಾಡಿದ್ದಾರೆ. ಈ ಸಲಹೆಯಂತೆ ಬಹುಬೇಗ ನಡೆದುಕೊಳ್ಳಲಾಗುವುದೆಂದು ನಾನು ನಂಬುತ್ತೇನೆ. ಪೂರ್ವ ಬಂಗಾಲದಲ್ಲಿ ನೆರೆ ಉಂಟುಮಾಡಿದ ಹಾನಿಯ ಪರಿಹಾರ ಕಾರ್ಯಕ್ಕೆ ಹಿಂದು ಮುಸಲ್ಮಾನರಿಬ್ಬರೂ ತೊಡಗಬೇಕೆಂಬುದು ಇನ್ನೊಂದು ಸಲಹೆ. ನಾನು ಇದನ್ನು ಒಪ್ಪುತ್ತೇನೆ ಮತ್ತು ಈ ವಿಷಯವನ್ನು ಶಕ್ತವಾದ ಹಿಂದು ಮುಸಲಮಾನ ಸಮಿತಿಯೊಂದು ಪರಿಣಾಮಕಾರಿಯಾಗುವಂತೆ ನೋಡಿಕೊಳ್ಳುವುದೆಂದು ನಾನು ಆಶಿಸುತ್ತೇನೆ. ದುಡ್ಡಿಗಿಂತ ಹೆಚ್ಚಾಗಿ ಧಾನ್ಯ ಮತ್ತು ಕೆಲಸಗಾರರೇ ಈಗ ಬೇಕಾಗಿದ್ದಾರೆ. ಪರಿಹಾರ ಕಾರ್ಯಕ್ಕಾಗಿ ಕಲ್ಕತ್ತದ ಮೇಯರರು ನನಗೆ ೧೫ ಸಾವರ ರೂಪಾಯಿಗಳ ಹುಂಡಿಯನ್ನು ಕಳುಹಿಕೊಟ್ಟಿದ್ದಾರೆ. ನಾನು ಆ ಹುಂಡಿಯ ಬಗ್ಗೆ ಕೃತಜ್ಞನಾಗಿದ್ದೇನೆ. ಅದು ಸರಿಯಾಗಿ ವಿನಿಯೋಗಿಸಲ್ಪಡುವಂತೆ ನಾನು ನೋಡಿಕೊಳ್ಳುತ್ತೇನೆ.

## ಚಂದ್ರನಗರ

ಸತ್ಯಾಗ್ರಹಿಗಳೆಂದು ಹೇಳಿಕೊಳ್ಳುವ —ನಾನು ಕೇಳಿದ ಹೇಳಿಕೆ ನಿಜವಾದರೆ— ದುರಾಗ್ರಹಿಗಳಾದ ಕೆಲವರು ಅಧಿಕಾರಿಗಳ ಬಂಗಲೆಯನ್ನು ಮುತ್ತಿರುವರೆಂದು ಚಂದ್ರನಗರದಿಂದ ಸುದ್ದಿಯೊಂದು ಬಂದಿದೆ. ಆ ಕ್ರಮವನ್ನು ನಾನು ಮನ್ನಿಸಿದ್ದೇನೆಂದು ಸೂಚಿಸಲಾಗಿದೆ. ಅದು ಶುದ್ಧ ಸುಳ್ಳೆಂದು ನಾನು ಹೇಳಬೇಕಾಗಿದೆ. ಕೆಲವರು ನನ್ನ ಹತ್ತಿರ ಬಂದಾಗ ಇದು ಸತ್ಯಾಗ್ರಹಕ್ಕೆ ಸಮುಚಿತವಲ್ಲವೆಂದು ನಾನು ಹೇಳಿದ್ದೆ. ಅದರಲ್ಲಿ ಎಂದೂ ದುರಾಗ್ರಹವಿರಲಾರದು. ಅಂತಹ ವಿಷಯಗಳನ್ನು ನೋಡಿಕೊಳ್ಳಲು ಪಂಡಿತ ನೆಹರು ಇದ್ದಾರೆ. ಎಷ್ಟೇ ಆಗಲಿ, ಫ್ರೆಂಚರೊಂದು ದೊಡ್ಡ ಜನಾಂಗದವರು, ಸ್ವಾತಂತ್ರ್ಯಪ್ರಿಯರು. ಹಿಂದೀಯರು ಏನಾದರೂ ಆಕಸ್ಮಿಕ ಕೃತ್ಯಗಳನ್ನು ನಡೆಸದಂತೆ ನೋಡಿಕೊಂಡು ಹಿಂದುಸ್ತಾನದಲ್ಲಿರುವ ಫ್ರೆಂಚ ಪ್ರದೇಶಗಳನ್ನು ಸಂರಕ್ಷಿಸುವುದು ಭಾರತದ ಕರ್ತವ್ಯವಾಗಿದೆ. ಆದುದರಿಂದ ಮುಖ್ಯ ಮಂತ್ರಿಯು ಚಂದ್ರನಗರಕ್ಕೆ ಸತ್ಯಾಂಶವನ್ನು ತಿಳಿದು ತನ್ನ ಕೈಯ್ಯಲ್ಲಾದುದನ್ನು ಮಾಡಲು ಹೋಗಿರುವುದು ನನಗೆ ಒಂದು ಸಂತೋಷದ ಸಂಗತಿಯಾಗಿದೆ.

## ಪೋಲೀಸರು

ಶಾಹೀದ ಸಾಹೇಬರನ್ನು ನನ್ನನ್ನು ಸಂರಕ್ಷಿಸಲು ನಿಯಮಿಸಲ್ಪಟ್ಟ ಪೋಲೀಸರನ್ನು ಜನರು ಹೇಗೆ ನಡೆಸಿಕೊಂಡರೆಂಬುದನ್ನು ನಾನು ನಿಮಗೆ ವಿವರಿಸಬೇಕಾಗಿದೆ. ಪೋಲೀಸರ ಆಜ್ಞೆಗಳನ್ನು ಉಲ್ಲಂಘಿಸುವದು ಅತ್ಯಂತ ಅಯೋಗ್ಯವಾದುದು. ಅನುಕರಣೀಯವಾದ ಸಹನೆ ಮತ್ತು ವಿನಯಗಳಿಂದ ಅವರು ತಮ್ಮ ಕಠಿಣ ಕಾರ್ಯವನ್ನು ನಡೆಸುತ್ತಿದ್ದುದನ್ನು ನಾನು ನೋಡಿದ್ದೇನೆ. (ಸ್ವಚ್ಛಂದವಾಗಿ ವರ್ತಿಸುವುದು ತಪ್ಪು) ಅದರಲ್ಲಿ ದಾಸ್ಯವಲ್ಲದೆ ಸ್ವಾತಂತ್ರ್ಯವಿಲ್ಲ. ನಿಮಗೆ ನಾನು ಎಚ್ಚರಿಕೆ ಕೊಡುತ್ತೇನೆ: ನೋಡಿರಿ, ಅಧಿಕಾರಿಗಳು ತಮ್ಮ ಬಲವನ್ನು ಹಿಂತೆಗೆದುಕೊಳ್ಳುವಂತೆ ಕೇಳಿಕೊಳ್ಳುತ್ತೇನೆ; ಏಕೆಂದರೆ, ಸಾರ್ವಜನಿಕ ಕರ್ತವ್ಯವೊಂದನ್ನು ನೆರವೇರಿಸುವಾಗ ಅವರನ್ನು ಹೀಗೆ ಅವಮಾನಕ್ಕೀಡುಮಾಡುವುದು ನನಗೆ ರುಚಿಸುವುದಿಲ್ಲ. ಯೋಚಿಸಿದಂತೆ ಅವರನ್ನು ಹಿಂತೆಗೆದುಕೊಳ್ಳುವ ಅಗತ್ಯ ಬೀಳದಂತೆ ನೀವೆಲ್ಲ ಕ್ರಮಬದ್ಧವಾಗಿ ನಡೆದುಕೊಳ್ಳುವಿರೆಂದು ನಾನು ನಿರೀಕ್ಷಿಸುತ್ತೇನೆ. ಎಷ್ಟಾದರೂ ಇಂದು ಪೋಲೀಸರೂ ಸೈನಿಕರೂ ಜನತೆಯ ಸೇವಕರಲ್ಲದೆ ಯಜಮಾನರಲ್ಲ.

## ಈದ್

ಕೊನೆಯದಾಗಿ ಮುಂಬರುವ ಈದ್ ಉತ್ಸವದ ಬಗ್ಗೆ ನಿಮಗೆ ಒಂದೆರಡು ಮಾತುಗಳನ್ನು ಹೇಳಬಯಸುತ್ತೇನೆ. ಮಸೀದೆಗಳಲ್ಲಿ ಮುಸಲಮಾನ ಗೆಳೆಯರೊಂದಿಗೆ ನಾನು ದಕ್ಷಿಣ ಅಫ್ರಿಕದಲ್ಲಿ ೨೦ ವರ್ಷ ಆ ಉತ್ಸವದಲ್ಲಿ ಭಾಗವಹಿಸಿದ್ದೆ. ಈಗ ಕಲಕತ್ತ ನಗರದಲ್ಲಿ ಸದಾಶಯಗಳ ಪ್ರವಾಹವೇ ಬೆಳೆದುಕೊಂಡು ಹರಿದು ಹೋಗುತ್ತಿರುವಾಗ ಗೆಳೆತನವನ್ನು ಚಿರಸ್ಥಾಯಿಯಾಗಿ ಮಾಡುವಂಥ ಕಾರ್ಯಗಳನ್ನು ಪ್ರತಿಯೊಬ್ಬನೂ ಕೈಕೊಳ್ಳುವನೆಂದೂ ನಾನು ನಿರೀಕ್ಷಿಸುತ್ತೇನೆ. ಭಾವಾವೇಶದ ಉತ್ಸಾಹದ ಭರತದಲ್ಲಿ ಭಾಗವಹಿಸುವುದು ಸುಲಭ; ಆದರೆ ಆ ಭಾವವನ್ನು ದೃಢಗೊಳಿಸಲು ಪ್ರತಿದಿನ ದುಡಿವ ಕಾರ್ಯಕರ್ತರನ್ನು ತಯಾರಿಸುವುದು ದುಷ್ಕರ. ನಾನು ಅಂತಹ ಕೆಲಸಗಳನ್ನು ಈ ನಗರದಲ್ಲಿ ಕಾಣಬಯಸುತ್ತೇನೆ; ಏಕೆಂದರೆ, ಅದರ ಪರಿಣಾಮವನ್ನು ಉಳಿದ ಇಡಿಯ ನಾಡು ಅನುಭವಿಸಬಲ್ಲದು. ನೀವು ಇದನ್ನು ಮಾಡಲು ತಪ್ಪಿದರೆ ಇಂದಿನ ಸ್ವಾತಂತ್ರ್ಯವು ಕೇವಲ ("ಒಂಬತ್ತು ದಿನಗಳ ಆಶ್ಚರ್ಯ") ನೀರಮೇಲಣ ಗುಳ್ಳೆಯಂತಾದೀತೆಂದು ನಾನು ನಿಮ್ಮನ್ನು ಎಚ್ಚರಿಸಬಯಸುತ್ತೇನೆ.

ಬೇಲಿಯಾಘಾಟ, ೧೯—೮—೪೭

## ನಿಗ್ರಹವಿಲ್ಲ

ನಾನು ೧/ ಗಂಟೆ ತಡಮಾಡಿದೆ; ಕ್ಷಮೆಯಿರಲಿ. ನನ್ನ ಪಕ್ಷದವರು ತಪ್ಪು ಮಾಡಿಲ್ಲ. ಕಾಂಚರಪಾರದಲ್ಲಿ ಬಹುಸಂಖ್ಯಾಕರಿರುವ ಹಿಂದುಗಳ ಆಗ್ರಹಗಳ ದೆಸೆಯಿಂದ ಮುಖ್ಯ ಮಂತ್ರಿಗಳಾದ ಶಾಹೀದ ಸಾಹೇಬರೂ ಇತರರೂ, ನಾನೂ ಅಲ್ಲಿಗೆ ಹೋಗಬೇಕಾಗಿ ಬಂದಿತು. ಮರಳುವಾಗ ದಾರಿಯಲ್ಲಿ ಕೆಲವು ತಂಡಗಳು ತಮ್ಮ ಅಭಿನಂದನೆಗಳನ್ನು ವ್ಯಕ್ತಪಡಿಸಲು ನಮ್ಮನ್ನು ತಡೆದವು. ಸಂಯಮದಿಂದ ತಡೆಯುತ್ತಿದ್ದರೆ ಇಂತಹ ಸಂತೋಷ ಪ್ರದರ್ಶನವು ಮುಖಂಡರನ್ನು ಕೊಂದೇ ಹಾಕುವುದು ಮತ್ತು ಅನಂತರ ದಾಕ್ಷಿಣ್ಯದ ಧರ್ಮಸಂಕಟಕ್ಕೆ ಪಕ್ಕಾಗಿಸುವ ಅಂತಹ ಪ್ರದರ್ಶನವನ್ನು ಕಡೆಗೆ ನೀವೇ ತೆಗಳುವ ಪ್ರಸಂಗ ಉಂಟಾಗುತ್ತದೆ. ನೀವು ನೋಡುತ್ತಿರುವ ಭ್ರಾತೃಭಾವ ಪ್ರಸರಣದಿಂದ ಮಿತಿಮೀರಿ ಹಿಗ್ಗಬಾರದೆಂದು ನಾನು ನಿಮ್ಮನ್ನು ಎಚ್ಚರಿಸುತ್ತೇನೆ. ಅದರ ಹಿಂದೆ ಬ್ಯಾರಕಪೂರ, ಕಾಂಚನಪಾರ ಮತ್ತು ನನಗೆ ಹೆಸರು ನೆನಪಿಲ್ಲದ ಎಷ್ಟೋ ಸ್ಥಳಗಳು ವಿರುದ್ಧ ದಿಕ್ಸೂಚಿಗಳಾಗಿವೆ. ಅವುಗಳ ಬಗ್ಗೆ ಕ್ಷಮೆಯನ್ನಾಗಲಿ ಪ್ರಾಯಶ್ಚಿತ್ತವನ್ನಾಗಲಿ ನೀವು ಕೇಳಬಾರದು. ಹಿಂದುಸ್ತಾನದಲ್ಲಾಗಲಿ, ಪಾಕಿಸ್ತಾನದಲ್ಲಾಗಲಿ, ಬಹುಸಂಖ್ಯಾಕರಿಗೆ ಕ್ಷಮೆಯೂ ಇಲ್ಲ, ಪ್ರಾಯಶ್ಚಿತ್ತವೂ ಇಲ್ಲ. ಬಹುಸಂಖ್ಯಾಕ ಹಿಂದುಗಳು ತಮ್ಮ ಧರ್ಮ ಮತ್ತು ಕರ್ತವ್ಯಗಳನ್ನು ಬೆಲೆಯುಳ್ಳ ವಸ್ತುಗಳೆಂದು ತಿಳಿದರೆ ಅವರು ಎಂಥ ಪ್ರಸಂಗದಲ್ಲೂ ಅನ್ಯಾಯವನ್ನು ಆಚರಿಸರು. ಅವರು ಬಹುಸಂಖ್ಯಾಕರಲ್ಲದೆ ಬೇರೆಯ ನ್ಯಾಯದಾತರಿಲ್ಲದ ಅಲ್ಪಸಂಖ್ಯಾಕರ ತಪ್ಪುತಡೆಗಳನ್ನು ಕಡೆಗಣಿಸುವರು. ನನ್ನ ಮುಸಲಮಾನ ಗೆಳೆಯನೊಬ್ಬ ಕೊಟ್ಟ ಹೇಳಿಕೆಯನ್ನು ನಾನು ದುಃಖದಿಂದಲೂ ಲಜ್ಜೆಯಿಂದಲೂ ಕೇಳಬೇಕಾಯಿತು. ಅಲ್ಲಿ ಬಹುಸಂಖ್ಯಾಕರಾದ ಹಿಂದುಗಳಿಗೆ ಮುಸಲ್ಮಾನರು ಅಡಿಯಾಳಾಗಿರಬೇಕಾಯಿತು ಮತ್ತು ಪ್ರಾರ್ಥನೆಯ ಕಾಲದಲ್ಲಿ ಮಸೀದೆಯೆದುರು ಸಂಗೀತ ವಾದನವನ್ನು ಮೌನದಿಂದ ಸಹಿಸಬೇಕಾಯಿತು ಎಂದು ಅವನು ಹೇಳಿದನು. ಮುಸಲಮಾನರು ಅಷ್ಟು ನಿರಾಶರಾಗಬೇಕಿಲ್ಲ. ನನ್ನ ಹತ್ತಿರ ಮೇಲಿನ ಮಾತನ್ನು ಹೇಳಿದ ಗೆಳೆಯನು ಅಬುದ್ಧಿಪೂರ್ವಕವಾಗಿ ಪಾಕಿಸ್ತಾನದಲ್ಲಿ ಅದರ ಸೇಡನ್ನು ತೀರಿಸಿಕೊಳ್ಳಲಾಗುವದೆಂಬ ಅರ್ಥವನ್ನು ತಾನು ಸೂಚಿಸಿದನೆಂಬುದನ್ನು ತಿಳಿದುಕೊಳ್ಳಲಿಲ್ಲ.

ಪ್ರತಿ ಬಹುಸಂಖ್ಯಾಕ ವರ್ಗವೂ ಮತ್ತೊಂದು ರಾಜ್ಯದಲ್ಲಿ ಬಹುಸಂಖ್ಯಾಕರೇನು ಮಾಡಿದರೆಂಬುದನ್ನು ಗಣಿಸದೆ ವಿನಯಸಂಪನ್ನನಾಗಿ ತನ್ನ ಕರ್ತವ್ಯವನ್ನು ತಾನು ನಿರ್ವಹಿಸಬೇಕು. ಆದುದರಿಂದ ಪಾಕಿಸ್ತಾನ ಮತ್ತು ಒಕ್ಕೂಟ ಸರಕಾರದ ಮುಖ್ಯ ಮಂತ್ರಿಗಳು ಬೇರೊಂದು ವಿಧಾನವನ್ನು ಒಮ್ಮತದಿಂದ ಬಳಕೆಗೆ ತರುವ ವರೆಗೆ ಎಷ್ಟೋ ಸಲ ಬಲಾತ್ಕಾರದಿಂದ ಬ್ರಿಟಿಶರ ಆಡಳಿತದಲ್ಲಿ ಅನುಸರಿಸಲ್ಪಡುತ್ತಿದ್ದ ರೂಢಿಯನ್ನು ನಮ್ಮ ರಾಜ್ಯಗಳಲ್ಲಿ ಸಂಪೂರ್ಣವಾಗಿ ಸ್ವಯಂಸ್ಫೂರ್ತಿಯಿಂದ ಆಚರಣೆಗೆ ತರಬೇಕು. ತಮ್ಮ ಅಲ್ಪಸಂಖ್ಯಾಕರ ಮೇಲೆ ಗರ್ವದಿಂದ ತಮ್ಮ ಇಷ್ಟದಂತೆ ನಡೆಯಬೇಕೆಂಬ ಆಜ್ಞೆಯನ್ನು ಹೊರಿಸುವವರು ಹುಚ್ಚರು ಮತ್ತು ಬಹಳ ತಪ್ಪು ತಿಳುವಳಿಕೆಯುಳ್ಳವರು. ಆದುದರಿಂದ ಈಗಿರುವ ಸದ್ಭಾವವನ್ನು ದೃಢಪಡಿಸಬೇಕಾದರೆ ಅವರು ಎಂತಹ ಪ್ರಸಂಗದಲ್ಲೂ ನ್ಯಾಯ್ಯ ಮಾರ್ಗದಿಂದ ತಪ್ಪಿ ನಡೆಯದಂತೆ ಬದ್ಧಪ್ರತಿಜ್ಞರಾಗಬೇಕು.

ಕಲಕತ್ತ; ೨೦—೮—೪೭

ಬ್ಯಾರಕ್‌ಪುರದ ಪೋಗ್ರಪತಿಯಲ್ಲಿ ಪ್ರಾರ್ಥನೆ ಜರುಗಿತು. ಅದು ಭ್ರಾತೃಭಾವಪ್ರಸಾರದ ಒಂದು ಅದ್ವಿತೀಯ ದೃಶ್ಯವಾಗಿತ್ತು. ಎಲ್ಲ ಜಾತಿ ವರ್ಗಗಳಿಗೆ ಸೇರಿದ ನಾಲ್ಕು ಲಕ್ಷಕ್ಕೆ ಮೀರಿದ ಜನರು ಸಭೆಗೆ ಹಾಜರಿದ್ದರು. ಸಭಾಸ್ಥಳವನ್ನು ಸಮೀಪಿಸಲಾರದ ಜನರು ಹತ್ತಿರದ ಕಟ್ಟಡದ ಮಾಳಿಗೆಯನ್ನೇರಿ ನೋಡುತ್ತಿದ್ದರು. ಸನಿಹದಲ್ಲಿ ಸಿಕ್ಕಿದ ಮರಗಳನ್ನು ಹತ್ತುತ್ತಿರುವ ನೂರಾರು ಜನರು ಸಹ ಅಲ್ಲಿ ಕಂಡುಬಂದರು.

## ಚಿತ್ತಗಾಂಗ

ಈಗ ಚಿತ್ತಗಾಂಗಿನ ಕಡೆ ನಿಮ್ಮ ಲಕ್ಷ್ಯವನ್ನು ಸೆಳೆಯುತ್ತೇನೆ. ಅಲ್ಲಿಯ ಸಂತ್ರಸ್ತರಿಗಾಗಿ ನಿಧಿ ಸಂಗ್ರಹಿಸುವುದು, ಆಹಾರ ವಸ್ತ್ರ ಔಷಧೋಪಚಾರಗಳ ಅವಶ್ಯಕತೆಯನ್ನು ಪೂರೈಸುವುದು ನಿಮ್ಮ ಕರ್ತವ್ಯ. ಪರಿಹಾರ ಕಾರ್ಯಕ್ಕೆ ಸ್ವಯಂಸೇವಕರನ್ನು ಕಳುಹಬೇಕು. ಅಲ್ಲಿಗೆ ಮಾರವಾಡಿಗಳ ಪರಿಹಾರ ಸಂಘ ಮತ್ತು ಶ್ರೀ ಮೂರ್‌ಹೆಡ್ಡರ ನೇತೃತ್ವದಲ್ಲಿ ಮಿತ್ರ ಸೇವಾಸಂಘ ಇವು ಆಗಲೆ ಕೆಲಸಗಾರರನ್ನು ಕಳುಹಿರುವುದು ಸಂತೋಷಕರವಾಗಿದೆ.

## ಪಂಜಾಬ

ಕಲಕತ್ತದಲ್ಲೀಗ ಶಾಂತಿಯಿರುವುದರಿಂದ ನಾನು ಪಂಜಾಬಿಗೆ ಹೋಗಬೇಕೆಂದು ಅಲ್ಲಿಂದ ಪತ್ರಗಳು ಬಂದಿವೆ. ದೇವರು ಕರೆದರೆ ಖಂಡಿತವಾಗಿ ನಾನು ಅಲ್ಲಿಗೆ ಹೋಗುವೆನು. ಆದರೆ ಎರಡೂ ಸಾಮಂತ ರಾಜ್ಯಗಳ ಮುಖ್ಯ ಮಂತ್ರಿಗಳು ಪಂಜಾಬಿನಲ್ಲಿ ಶಾಂತಿ ಸ್ಥಾಪನೆ ಮಾಡುವುದೇ ತಮ್ಮ ಮುಖ್ಯ ಕಾರ್ಯವೆಂದು ಸಾರಿದ್ದಾರೆ. ತಮ್ಮಲ್ಲಿರುವ ಸರ್ವ ಸಾಧನವನ್ನೂ ಆ ಬಗ್ಗೆ ಅವರು ಉಪಯೋಗಿಸುವರು. ಮತ್ತು ಪಂಜಾಬಿನ ಸಾರ್ವಜನಿಕರ ಅಭಿಪ್ರಾಯವನ್ನು ಅದಕ್ಕೆ ಬೆಂಬಲವಾಗಿ ತೆಗೆದುಕೊಳ್ಳುವರು. ಕಲಕತ್ತದಂತೆಯೇ ಪಂಜಾಬಿನಲ್ಲೂ ಪರಿಸ್ಥಿತಿ ಹದಕ್ಕೆ ಬರುವುದೆಂದು ಆದರಿಂದ ನೀವು ನಂಬಬಹುದಾಗಿದೆ. ಪಂಜಾಬಿನ ಇಬ್ಬರು ಮುಖ್ಯ ಮಂತ್ರಿಗಳೂ ಮಾಸ್ಟರ್ ತಾರಾಸಿಂಗ್ ಹಾಗೂ ಗಿಯಾನಿ ಕರ್ತಾರಸಿಂಗರೂ ಈ ವಿಧವಾಗಿ ಹೇಳಿದ್ದಾರೆ.

ಕೇಂದ್ರ ಶಾಂತಿ ಸಮಿತಿಯು ಇಷ್ಟರ ವರೆಗೆ ಮಾಡಿದ ಕಾರ್ಯದ ಫಲಿತಾಂಶವನ್ನು ದೃಢಪಡಿಸಬೇಕಾಗಿದೆ. ಹಿಂದುಗಳನ್ನು ಹೇಗೆ ಅವರು ಬಿಟ್ಟೋಡಿದ ಸ್ಥಳಗಳಲ್ಲಿ ಪುನರ್ನಿವೇಶಿಸಬೇಕಾಯಿತೋ ಹಾಗೇ ಬಡ ಮುಸಲ್ಮಾನರನ್ನೂ ಪುನಃ ಅವರವರ ವಸತಿಗಳಲ್ಲಿ ನಿಲ್ಲಿಸಲು ಅವರು ಪ್ರಯತ್ನಿಸಬೇಕು. ಪ್ರತಿಯೊಂದು ಮೊಹಲ್ಲದಲ್ಲೂ ಶಾಂತಿ ಸಮಿತಿಗಳನ್ನು ಘಟಿಸಬೇಕು ಮತ್ತು ಅವರು ಶುದ್ಧ ಹೃದಯದ ಒಬ್ಬ ಮುಸಲ್ಮಾನ ಹಾಗೂ ಒಬ್ಬ ಹಿಂದು ಹೀಗೆ ಇಬ್ಬರನ್ನಾದರೂ ಒಟ್ಟು ಕೆಲಸ ಮಾಡಲು ನಿಯೋಜಿಸಬೇಕು. ತಮ್ಮ ಕಾರ್ಯಕ್ಷೇತ್ರದಲ್ಲಿ ಈ ಸಮಿತಿಗಳು ಸಂಚರಿಸಬೇಕು. ಸ್ನೇಹವಿಲ್ಲದಲ್ಲಿ ಸ್ನೇಹ ಹುಟ್ಟಿಸಲು ಅವರು ಕೆಲಸ ಮಾಡಬೇಕು. ಪುನರ್ನಿವೇಶನದ ಕೆಲಸದಲ್ಲಿ ಅವರು ವಿವರಗಳನ್ನು ಪರಿಶೀಲಿಸಬೇಕಾಗುತ್ತದೆ. ಆಹಾರ, ವಸತಿ ಮತ್ತು ವಸ್ತ್ರಗಳನ್ನು ಮನೆಗೆ ಮರಳುವ ಜನರಿಗೆ ಒದಗಿಸಬೇಕು. ಕಳೆದ ಕೆಲ ದಿನಗಳಲ್ಲಿ ಕಂಡು ಬಂದ ಸದ್ಭಾವವನ್ನು ಕಲಕತ್ತದ ಸ್ತ್ರೀಪುರುಷರು ದೃಢಪಡಿಸುವುದರಲ್ಲಿ ಸಹಕರಿಸಿದ ದಿವಸವು ಕಲಕತ್ತದ ಮಹಾದಿನವೇ ಸರಿ. ಈ ಕಾರ್ಯದಲ್ಲಿ ಎಲ್ಲ ಪಕ್ಷಗಳೂ ಸಹಕರಿಸಬೇಕು. ಈಗ ಭಾರತವನ್ನು ಎರಡು ಸಾಮಂತರಾಜ್ಯಗಳನ್ನಾಗಿ ವಿಭಜಿಸುವುದರಲ್ಲಿ ಎಲ್ಲ ಪಕ್ಷಗಳೂ ಸಮ್ಮತಿಸಿರುವಾಗ ಕಲಹಕ್ಕೆ ಕಾರಣವಿಲ್ಲ; ಮತ್ತು ಶಾಂತ ಸ್ಥಿತಿಯನ್ನು ಮರಳಿ ಸ್ಥಾಪಿಸಲು ಎಲ್ಲರೂ ಸಹಕರಿಸಬಹುದು.

## ರಾಷ್ಟ್ರಧ್ವಜಗಳು

ವ್ಯಕ್ತಿಶಃ ನನ್ನನ್ನು ಕೇಳಿದರೆ ಪಾಕಿಸ್ತಾನ ಹಿಂದುಸ್ತಾನ ಸಾಮಂತ ರಾಜ್ಯಗಳು ಗೆಳೆತನದಿಂದ ಇರುವುದರಿಂದ ಇಂಗ್ಲಂಡು ಅಮೇರಿಕಗಳಂತೆ ಇಲ್ಲಿಯಾದರೂ ಪರಸ್ಪರರ ರಾಷ್ಟ್ರಧ್ವಜವನ್ನು ಎರಡೂ ರಾಜ್ಯಗಳಲ್ಲಿ ಪ್ರದರ್ಶಿಸಬಹುದೆಂದು ಹೇಳಬಲ್ಲೆ.

## ಗೋವು

ಹಿಂದೀ ಒಕ್ಕೂಟದಲ್ಲಿ ಗೋವಧೆ ನಿಲ್ಲಿಸುವ ಕಾಯದೆ ಪಾಸು ಮಾಡಬೇಕೆಂದು ಕೆಲವರೆನ್ನುತ್ತಾರೆ. ನನ್ನ ಮತವೇನೆಂದರೆ ಅವರು ಕಾಯದೆಯ ಮೂಲಕ ಹಾಗೆ ಮಾಡಹೋದರೆ ಅದೊಂದು ದೊಡ್ಡ ತಪ್ಪಾಗುವದೆಂಬುದು. ನಾನು ಅರ್ಧಶತಮಾನದಿಂದ ಗೋಭಕ್ತನಾಗಿರುವವನು. ಭಾರತದ ಅರ್ಥಪ್ರಪಂಚದಲ್ಲಿ ಗೋಮಾತೆಗೆ ಶಾಶ್ವತವಾದ ಸ್ಥಾನವಿದೆ. ಮುಸ್ಲಿಮರು ಸ್ವಯಂಸ್ಫೂರ್ತಿಯಿಂದ ಗೋಹತ್ಯೆಯನ್ನು ಬಿಡುವಂತೆ ಅತ್ಯಂತ ಚಾಕಚಕ್ಯತೆಯಿಂದ ಹಿಂದುಗಳು ಮುಸ್ಲಿಮರ ಸಹಾನುಭೂತಿಯನ್ನು ಪಡೆಯಲು ಶಕ್ತರಾದಾಗ ಮಾತ್ರ ಗೋವನ್ನು ಉಳಿಸಬಹುದು. ಆಗ ಅವರು ತಮ್ಮ ಹಿಂದುಗೆಳೆಯರ ಭಾವನೆಗೆ ಮನ್ನಣೆ ಕೊಡುವ ತಮ್ಮ ಹೊಣೆಯನ್ನು ಅರಿತು ಹಾಗೆ ನಡೆದುಕೊಳ್ಳುತ್ತಾರೆ. ಖಿಲಾಫತ್ತಿನ ದಿನಗಳಲ್ಲಿ ಇದು ಬೇಕಾದಷ್ಟು ಸಲ ನಿದರ್ಶನಕ್ಕೆ ಬಂದಿದೆ. ಭಾರತವು ಈಗ ಸ್ವತಂತ್ರವಾಗಿರುವುದರಿಂದ ಪರಸ್ಪರರಲ್ಲಿ ಹಿಂದು-ಮುಸಲಮಾನರು ಸರಿಯಾಗಿ ನಡೆದುಕೊಂಡರೆ ಹಿಂದಿನ ಅದೇ ಸಂಬಂಧವನ್ನು ಪುನಃ ಸ್ಥಾಪಿಸಬಹುದು.

ಕೊನೆಯದಾಗಿ ಬಲಾತ್ಕರಿಸುವ ಕಾಯದೆಯನ್ನು ತಂದರೆ ಹಿಂದುಗಳಿಗೆ ಅದರಿಂದ ಅನ್ಯಾಯವೇ ಸಂಭವಿಸುವದು. ಯಾವ ಜಾತಿಗೆ ಸೇರಿರಲಿ, ಮನುಷ್ಯನಾದವನನ್ನು ಶುದ್ಧ 'ನ್ಯಾಯ ದೃಷ್ಟಿಯಿಂದ ನಡೆಸಿಕೊಂಡಾಗ ಮಾತ್ರ ಹಿಂದು ಧರ್ಮವನ್ನು ಉಳಿಸಿಕೊಳ್ಳಬಹುದು.

ಪಾರ್ಕಸರ್ಕಸ್ ಕಲಕತ್ತಾ ೨೧-೮-೪೭

## ಸಂಯುಕ್ತ ಧ್ವಜ

ಅನಂತರ ಗಾಂಧೀಜಿಯವರು ಪಾಕಿಸ್ತಾನ ಮತ್ತು ಹಿಂದೀ ಒಕ್ಕೂಟ ಧ್ವಜಗಳು ಒಟ್ಟಿಗೆ ಪ್ರಾಮುಖ್ಯವಾಗಿ ಶಿಖರದಲ್ಲಿ ಹಾರಾಡುತ್ತಿರುವದರ ಕಡೆಗೆ ಜನತೆಯ ಲಕ್ಷ್ಯವನ್ನೆಳೆಯುತ್ತ ಹಿಂದುಸ್ತಾನದಲ್ಲೆಲ್ಲ ಈ ಸುಂದರ ನೋಟವು ಸಾರ್ವತ್ರಿಕವಾಗಿ ಕಾಣುವಂತಾಗಲೆಂದು ಆಶಿಸಿದರು. "ಹಿಂದು ಮುಸ್ಲಿಮ ಕೀ ಜಯ" ಎಂಬ ಘೋಷಣೆಯ ಪುನರುಜ್ಜೀವನ ಮಾಡಬೇಕೆಂದು ಶಾಹೀದ ಸಾಹೇಬರು ಸೂಚಿಸಿದ್ದಕ್ಕೆ ತಮಗೆ ಸಂತೋಷವೆನಿಸುತ್ತದೆ. ಏಕೆಂದರೆ ಖಿಲಾಫತದ ಸುವರ್ಣ ಸಮಯದಲ್ಲಿ ಅದರ ಪ್ರಾರಂಭವಾಗಿತ್ತೆಂದು. ಹೇಳಿ ಮುಸ್ಲಿಮ ಜತೆಗೈದಿಗರೊಬ್ಬರು ಇಕ್ಬಲರ 'ಸಾರೇ ಜಹಾನಸೆ ಅಚ್ಛಾ' ಎಂಬ ಪದ್ಯವನ್ನು ಹೇಳುತ್ತಿರುವ ಹಳೆಯ ದಿನಗಳನ್ನು ಗಾಂಧೀಜಿ ನೆನಸಿದರು. ದಿವಂಗತ ಸರಳಾದೇವಿ ಚೌಧರಾಣಿಯವರಿಂದ ಅಷ್ಟೇ ಮಧುರವಾಗಿ ಆ ಹಾಡನ್ನು ತಾವು ಹಾಡಿಸುತ್ತಿರುವದನ್ನು ಗಾಂಧಿಜಿ ಹೇಳಿದರು. ಅಷ್ಟೇ ಮಧುರವಾಗಿ ಮತ್ತು ಸ್ಫೂರ್ತಿಯಿಂದ ಆದಿನವೆ ಈ ಹಾಡನ್ನು ಕೇಳಿದ್ದು ಇದು ಮೂರನೆಯ ಸಲ. ಹಾಡಿನ ರಾಗವು ಎಷ್ಟು ಇಂಪಾಗಿರುವುದೋ ಅಷ್ಟೇ ಶಬ್ದಗಳೂ ಮನೋಹರವಾಗಿವೆ. ಧರ್ಮವು ಪರಸ್ಪರ ದ್ವೇಷವನ್ನು ಎಂದೂ ಕಲಿಸಲಿಲ್ಲ ಎಂಬ ವಾಕ್ಯಕ್ಕಿಂತ ಹೆಚ್ಚು ಮನೋಹರವಾದುದು ಬೇರೆ ಯಾವುದಿದೆ? ಈ ಶುಭಾರಂಭವು ಕೊನೆಯ ವರೆಗೆ ಬಾಳಲಿ ಮತ್ತು ನಮ್ಮ ಅಡಚಣೆಗಳ ನಿವಾರಣೆಗಾಗಿ ನಾವೆಂದೂ ಖಡ್ಗಕ್ಕೆ ಶರಣು ಹೋಗದಿರಲೆಂದು ನಾನು ಆಶಿಸುತ್ತೇನೆ. ಹಾಗಾಗಬೇಕಿದ್ದರೆ ಯಾವದೇ ಅನಪೇಕ್ಷಿತ ಘಟನೆ ಸಂಭವಿಸದಂತೆ ನಾವು ನೋಡಿಕೊಳ್ಳತಕ್ಕದ್ದು. ಮತ್ತು ಈ ದಿವಸವೇ ನನ್ನ ದೃಷ್ಟಿಗೆ ಬಿದ್ದಂತೆ ಯಾವದೊಂದು ಘಟನೆಯನ್ನು ಅತಿಶಯೋಕ್ತಿಯಾಗಿ ಬಣ್ಣಿಸಿ ಜಾತೀಯ ದೊಂಬಿಯಂತೆ ಕಾಣುವ ಹಾಗೆ ಮಾಡದಂತೆ ಎಲ್ಲರೂ ಎಚ್ಚರಪಡತಕ್ಕದ್ದು. ಅವಶ್ಯಕವಿದ್ದಲ್ಲೆಲ್ಲ ಸಹಾಯವನ್ನು ಕೊಡಲು ಸಾಕಾಗುವಷ್ಟು ಹಣವನ್ನು ಕೂಡಿಸಲಿಕ್ಕೆ ಒಂದು ಪುನರ್ನಿವೇಶನ ಸಮಿತಿಯನ್ನು ನೇಮಿಸಬೇಕೆಂದು ನನ್ನ ಅಭಿಪ್ರಾಯ.

## ಅಪಕ್ಷಪಾತ

ಆಯಾ ಗುಳೇಗಾರರು ತಮ್ಮತಮ್ಮ ಸ್ಥಳಗಳಿಗೆ ತಿರುಗಿ ಬರಬೇಕಾದರೆ ಸಂಪೂರ್ಣ ಅಪಕ್ಷಪಾತ ತ…

—ಗನೇ ಭಟಕ್ಕ

# ಗಾಂಧೀಜಿಯ ಪ್ರಾರ್ಥನೋತ್ತರ ಭಾಷಣಗಳು

(೮ನೇ ಪುಟದಿಂದ)

ಅವಶ್ಯವಾಗಿದೆ. ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಸರಕುಗಳನ್ನು ಸಾಗಿಸಲು ಬಂಡಿಗಳನ್ನು ಒದಗಿಸುತ್ತಿದ್ದ ಕೆಲ ಮುಸಲ್ಮಾನರನ್ನು ಪ್ರತ್ಯಕ್ಷ ಕ್ರಿಯೆಯ ದಿನಗಳಲ್ಲಿ ಆ ಕೆಲಸದಿಂದ ದೂರಮಾಡಲಾಯಿತೆಂದು ತಕರಾರು ಬಂದಿದೆ. ಅವರಿಗೆ ಬೇರೆ ಯಾವ ಉದ್ಯೋಗವೂ ಸಿಕ್ಕಲಿಲ್ಲಂತೆ. ಈ ಹೇಳಿಕೆಯು ನಿಜವಾಗಿದ್ದರೆ ಅವರನ್ನು ಪುನಃ ಕೆಲಸಕ್ಕೆ ತೆಗೆದುಕೊಳ್ಳತಕ್ಕದ್ದು. ಅವರನ್ನು ಪುನಃ ಆ ಕೆಲಸಕ್ಕೆ ಹಚ್ಚಿದ್ದಾದರೆ ಈಗ ಬೇರೆ ಪ್ರಾಂತಗಳಿಂದ ಕರೆಯಿಸಿಕೊಂಡ ಜನರ ಗತಿಯೇನು? ಇದೊಳ್ಳೆ ಜಟಿಲವಾದ ಪ್ರಶ್ನೆ. ಆದರೆ ವ್ಯಾಪಾರಸ್ಥರ ಬುದ್ಧಿಶಕ್ತಿಗೆ ನಿಲುಕಲಾರದ ಪ್ರಶ್ನೆಯೇನಲ್ಲ. ಮನಸಿದ್ದರೆ ಮಾರ್ಗವಿದ್ದೇ ಇದೆ. ಇಂಥ ವಿಷಯಗಳಲ್ಲಿ ಬಹಳ ದಕ್ಷತೆಯಿಂದ ವರ್ತಿಸುವಲ್ಲಿಯೆ ಶಾಶ್ವತ ಐಕ್ಯದ ಅಡಿಗಲ್ಲಿರುವದು. ತಿರುಗಿ ಬರಲು ಅತ್ಯಂತ ಆತುರರಾಗಿರುವ ನಿರಾಶ್ರಿತರ ಅಯೋಗ್ಯ ಲಾಭವನ್ನು ಮನೆಯೊಡೆಯರು ತೆಗೆದುಕೊಳ್ಳುತ್ತಿರುವ ಪ್ರಶ್ನೆಯೂ ಜಟಿಲವಾಗಿದೆ. ಎಷ್ಟು ದಿನಗಳವರೆಗೆ ಮನೆ ಖಾಲಿ ಬಿದ್ದಿದ್ದವೊ ಅಷ್ಟು ದಿನಗಳ ಬಾಡಿಗೆಯನ್ನು ಅವರು ಕೇಳಬಾರದು ಇಲ್ಲವೆ ಹೆಚ್ಚಿಗೆ ಬಾಡಿಗೆಯನ್ನೂ ಅವರು ಹೇರಬಾರದು. ಎಲ್ಲ ವ್ಯವಹಾರದಲ್ಲಿ ನಾವು ಪ್ರಾಮಾಣಿಕರಾಗಿದ್ದರೆ ಮತ್ತು ಎರಡೂ ಜಾತಿಯವರು ಒಬ್ಬರಿಗೊಬ್ಬರು ನಿಷ್ಠರಾಗಿದ್ದರೆ ಹೃದಯ ಸಮ್ಮಿಲನವಾಗಿ ಅದರ ಪರಿಣಾಮ ನಿಃಸಂಶಯವಾಗಿ ಪಂಜಾಬದ ಮೇಲೆ ಆಗುವದು ಮತ್ತು ಎರಡೂ ಸಾಮಂತ ರಾಜ್ಯಗಳ ಮಂತ್ರಿಗಳು ಮಾಡುತ್ತಿರುವ ಒಳ್ಳೆ ಕೆಲಸಕ್ಕೆ ಅದರಿಂದ ಸಹಾಯವಾಗುವದು.

## ಸೀಮಾ ಸಮಿತಿಯ ನಿರ್ಣಯ

ಅನಂತರ ಗಾಂಧೀಜಿಯವರು ಸೀಮಾ ಸಮಿತಿಯ ಮಧ್ಯಸ್ಥರ ನಿರ್ಣಯದ ಕಡೆಗೆ ಹೊರಳಿದರು. ವಿವಾದಕ್ಕೊಳಗಾದ ಎಲ್ಲ ಪಕ್ಷಗಳವರು ಕೂಡಿ ಈ ಮಧ್ಯಸ್ಥರನ್ನು ನೇಮಿಸಿದ್ದು. ಈ ನಿಷ್ಫಲ ಕಾರ್ಯವನ್ನು ಮಾಡಲು ಎಲ್ಲ ಪಕ್ಷದವರೂ ಬೇಕೆಂತಲೆ ಅವರನ್ನು ಆಮಂತ್ರಿಸಿದ್ದು. ಆಯಾ ಪಕ್ಷಗಳು ಮತ್ತು ಅವರು ಪ್ರತಿನಿಧಿಸುತ್ತಿರುವ ಸಾರ್ವಜನಿಕರು ಆ ನಿರ್ಣಯದಂತೆ ನಡೆಯಲಿಕ್ಕೆ ಬೇಕು. ನನಗೆ ಗೊತ್ತಿದ್ದ ಮತ್ತು ಉಳಿದ ಅನೇಕ ಪಂಚರನ್ನು ಕೂಡಿಕೊಂಡು ನಾನು ಮಾಡಿದ ಯಾವ ಪಂಚರ ನಿರ್ಣಯವೂ ಆಯಾ ಪಕ್ಷಗಳನ್ನು ಪೂರ್ಣವಾಗಿ ಸಮಾಧಾನಪಡಿಸಲಾರದು. ಆದರೆ ಒಮ್ಮೆ ಪಂಚರನ್ನ ನೇಮಿಸಿದ ಬಳಿಕ ಅವರ ನಿರ್ಣಯದಂತೆ ನಾವು ನಡೆಯಲಿಕ್ಕೆ ಬೇಕು. ಆಯಾ ಪಕ್ಷಗಳವರು ತಮ್ಮ ತಮ್ಮ ಮತಭೇದಗಳನ್ನು ತಾವೇ ಬಗೆಹರಿಸಿಕೊಳ್ಳುವದು ಉತ್ತಮ ಮಾರ್ಗವಾಗಿತ್ತೆಂಬಲ್ಲಿ ಸಂದೇಹವಿಲ್ಲ. ಖಾಜಾಸಾಹೇಬ ನಾಝೀಮುದ್ದೀನ ಮತ್ತು ಡಾ. ಘೋಷ ಈ ಇಬ್ಬರೂ ಮುಖ್ಯ ಮಂತ್ರಿಗಳು ಒಳ್ಳೆ ಜಾಣತನದಿಂದ ನಿದರ್ಶಿಸಿದಂತೆ ಆ ರಾಜಮಾರ್ಗವು ಯಾವಾಗಲೂ ಅವರಿಗೆ ತೆರೆದೇ ಇದ್ದಿತು.

ಖುಲ್ನಾದಲ್ಲಿಯ ಇಲ್ಲವೆ ಗೋಪಾಳಗಂಜದಲ್ಲಿಯ ಹಿಂದುಗಳಂತೆ ಮತ್ತು ಚಿತಗಾಂಗ ಗುಡ್ಡಗಾಡ ಪ್ರದೇಶದಲ್ಲಿಯ ಬೌದ್ಧರಂತೆ ಮುರ್ಶಿದಾಬಾದ ಮತ್ತು ಮಾಲ್ದಾದಲ್ಲಿಯ ಮುಸಲ್ಮಾನರು ತೀವ್ರ ಅಸಂತುಷ್ಟರಾಗಿರುವರೆಂಬುದು ನನಗೆ ಗೊತ್ತು. ಚಿತಗಾಂಗ ಗುಡ್ಡಗಾಡ ಪ್ರದೇಶವು ಪೂರ್ವ ಬಂಗಾಲಕ್ಕೆ ಸೇರಿಸಲ್ಪಟ್ಟಿದೆ. ಈ ನಿರ್ಣಯದ ಬಗ್ಗೆ ಬಡಿದಾಡುವದು ಮೂರ್ಖತನದ್ದಾಗಿರುವದಲ್ಲದೆ ಅಯೋಗ್ಯವೂ ಆಗಿರುವದೆಂದು ಆಯಾ ಪಕ್ಷದವರಿಗೆ ನಾನು ಹೇಳಬಯಸುತ್ತೇನೆ. ೧೫ ನೇ ತಾರೀಖಿನ ದಿನ ತಾತ್ಪದ ವಿಭಜನೆಗನುಸಾರವಾಗಿ ದಿನಾಚರಣೆಯಾಯಿತೆಂಬುದೇನು ಮಹತ್ವದ್ದಲ್ಲ. ನನ್ನ ಸಲಹೆಯನ್ನು ಕೇಳಿದ್ದರೆ ಈ ಅನಿಶ್ಚಿತ ಪರಿಸ್ಥಿತಿಯಲ್ಲಿ ದಿನಾಚರಣೆಯನ್ನು ಮಾಡಬೇಡಿರೆಂದು ನಾನು ಹೇಳುತ್ತಿದ್ದೆ. ಆದರೆ ಆಯಾ ಸ್ಥಳಗಳಲ್ಲಿ ನ್ಯಾಯ್ಯವಾಗಿ ಏರಿಸಬೇಕಾಗಿದ್ದ ಧ್ವಜವನ್ನು ಪ್ರಮಾದದಿಂದ ಏರಿಸಿರದಿದ್ದರೆ ಈಗ ಆ ತಪ್ಪನ್ನು ತಿದ್ದಿಕೊಂಡು ಸರಿಯಾದ ಧ್ವಜವನ್ನು ಏರಿಸುವಲ್ಲಿ ಹಿಂದೆ ಮುಂದೆ ನೋಡಬಾರದು ಏಕೆಂದರೆ ಆಯಾ ಪಕ್ಷಗಳಲ್ಲಿ ಈಗ ಯಾವದೆ ಬಗೆಯ ವ್ಯಾಜ್ಯ ಉಳಿದಿರುವದಿಲ್ಲ. ಎರಡು ಸಾಮಂತ ಸರಕಾರಗಳು ಪರಸ್ಪರ ಮಿತ್ರತ್ವ ಮತ್ತು ಮರ್ಯಾದೆಯನ್ನು ಒಳ್ಳೆ ನಿಷ್ಠೆಯಿಂದ ತೋರಿಸಲು ಮುಂದಾಗಿವೆ. ಆದುದರಿಂದ ಎರಡೂ ಧ್ವಜಗಳನ್ನು ಎರಡೂ ಸಾಮಂತ ಸರಕಾರಗಳಲ್ಲಿ ಹಾರಿಸಬೇಕೆಂದೂ ಇಲ್ಲವೆ ಸದ್ಯದಲ್ಲಿ ಯಾವದೇ ಧ್ವಜ ಹಾರಿಸಲ್ಪಟ್ಟಿದ್ದರೂ ಅದಕ್ಕೆ ಅಷ್ಟೇ ಯೋಗ್ಯ ಮನ್ನಣೆ ಕೊಡಬೇಕೆಂದೂ ನಾನು ಹೇಳಬಯಸುತ್ತೇನೆ.

ಮುರ್ಶಿದಾಬಾದ ಮತ್ತು ಮಾಲ್ದಾ ಪಶ್ಚಿಮ ಬಂಗಾಲದಲ್ಲಿ ಸೇರ್ಪಡೆಯಾದುದಕ್ಕೆ ಮುಸಲ್ಮಾನರಿಗೆ ಉಂಟಾದ ಅಂಜಿಕೆ ಇಲ್ಲವೆ ಖುಲ್ನಾ ಮತ್ತು ಗೋಪಾಳಗಂಜಗಳಲ್ಲಿ ಹಿಂದುಗಳಿಗೆ ಉಂಟಾದ ಶಂಕೆ ಮತ್ತು ಚಿತಗಾಂಗ ಗುಡ್ಡಗಾಡ ಪ್ರದೇಶದಲ್ಲಿ ಬೌದ್ಧರಿಗೆ ಬಂದ ಭೀತಿಯ ಕಾರಣ ನನಗೇನು ಗೊತ್ತಾಗುವದಿಲ್ಲ. ಎಲ್ಲ ಪಕ್ಷಪಂಗಡಗಳು ತೋರಿಸುತ್ತಿರುವ ಮಿತ್ರತ್ವವನ್ನು ಲಕ್ಷಿಸಿದ್ದಾದರೆ ಯಾವದೇ ಬಗೆಯ ಅಂಜಿಕೆಗೆ ಎಳ್ಳಷ್ಟು ಕಾರಣವಿಲ್ಲ. ಬಂಗಾಲದ ಯಾವದೇ ಭಾಗದಲ್ಲಿ ಅಲ್ಪಸಂಖ್ಯಾಕರ ಮೇಲೆ ಯಾವದೇ ರೀತಿಯಿಂದ ಒತ್ತಾಯ ನಿಶ್ಚಯವಾಗಿ ಆಗಲಿಕ್ಕಿಲ್ಲ. ಬಹುಸಂಖ್ಯಾಕರಿಗಿರುವಷ್ಟೆ ಹಕ್ಕು ಬಾಧ್ಯತೆಗಳು ಅಲ್ಪಸಂಖ್ಯಾಕರಿಗೂ ಸಿಕ್ಕುವವು.

ದೇಶಬಂಧುಪಾರ್ಕ ಕಲಕತ್ತೆ ೨೨-೮-೪೭

## ಸೈನಿಕಶಕ್ತಿ

ಸಭೆಯಲ್ಲಿ ಸಮ್ಮಿಲಿತವಾದ ಲಕ್ಷಗಟ್ಟಲೆ ಜನರು ಬಹಳ ಹೊತ್ತಿನ ವರೆಗೆ ಮೌನದಿಂದ ಕುಳಿತಿದ್ದರು. ಗಾಂಧೀಜಿಯವರು ಮಾತಾಡಲು ಪ್ರಾರಂಭಿಸಿದ ಕೂಡಲೆ ಅವರು ಆತುರರಾಗಿ ಹೊರಟಿದ್ದು ಹೋಗಹತ್ತಿದರು. ಆದುದರಿಂದ ಗಾಂಧೀಜಿಯವರು ತಮ್ಮ ಭಾಷಣವನ್ನು ಸಂಕ್ಷೇಪಿಸಿದರು. ಸಭಿಕರಲ್ಲಿ ಗಂಡಸರು ವಿನಂತಿಗೆ ಮಾನ್ಯಮಾಡಿ ವೇಳೆಗೆ ಸರಿಯಾಗಿ ಬಂದರೂ ಹೆಣ್ಣುಮಕ್ಕಳು ಮಾತ್ರ ಅದಕ್ಕೆ ಮನ್ನಣೆ ಕೊಡಲಿಲ್ಲೆಂಬದರ ಕಡೆಗೆ ಗಾಂಧೀಜಿಯವರು ಲಕ್ಷ್ಯವನ್ನೆಳೆದರು. ಭಕ್ತಿಪೂರ್ವಕವಾಗಿ ರಾಮಧುನ ಅಂದರೆ ಪರಮಾತ್ಮನ ನಾಮೋಚ್ಚಾರ ಮಾಡುವದರಲ್ಲಿರುವ ಶಕ್ತಿಯು ಕೆಲವು ಅನುಭವಿಕ ಜನರಿಗೆ ಮಾತ್ರ ಗೊತ್ತಿದೆಂದು ಅವರು ಅಭಿಪ್ರಾಯಪಟ್ಟರು. ವೇಳೆಗೆ ಸರಿಯಾಗಿ ಕೂಚು ಮಾಡುತ್ತಿರುವ ಲಕ್ಷಗಟ್ಟಲೆ ಸೈನಿಕರ ಶಕ್ತಿಯ ಅರಿವು ತಮಗಿದೆ, ಸೈನಿಕರ ಶಕ್ತಿಯಿಂದ ಜಗತ್ತಿನಲ್ಲಿ ಎಷ್ಟೊಂದು ಅನರ್ಥವುಂಟಾಗಿದೆಂಬದರ ಅರಿವು ಸಂಚಾರಕರಿಗೆ ಗೊತ್ತಾಗದಿರದು. ಯುದ್ಧವು ಕೊನೆಗೊಂಡಿದೆಂದು ಹೇಳಲಾಗುತ್ತಿದ್ದರೂ ಪ್ರತ್ಯಕ್ಷ ಯುದ್ಧಕ್ಕಿಂತ ಯುದ್ಧಾನಂತರದ ಪರಿಸ್ಥಿತಿ ಮತ್ತಷ್ಟು ಅಪಾಯಕರವಾಗಿದೆ. ಸೈನಿಕ ಶಕ್ತಿಯು ಪಾವಳಿ ಇಷ್ಟೊಂದು ಭೀಕರವಾಗಿದೆ.

## ರಾಮಧುನ

ಕೋಟ್ಯವಧಿ ಜನರು ಸಕಾಲದಲ್ಲಿ ರಾಮಧುನವನ್ನು ಪಠಿಸುವದರಿಂದ ಪ್ರಾಪ್ತವಾಗುತ್ತಿರುವ ಶಕ್ತಿಯು ಸೈನಿಕ ಶಕ್ತಿಗಿಂತ ಬೇರೆ ಬಗೆಯದಾಗಿದ್ದು ನಿಶ್ಚಯವಾಗಿ ಅದಕ್ಕಿಂತ ಶ್ರೇಷ್ಠತರವಾಗಿದೆಂದು ಸ್ವಲ್ಪವೂ ಹಿಂಜರಿಯದೆ ನಾನು ಹೇಳಬಲ್ಲೆ. ಭಕ್ತಿಪೂರ್ವಕವಾಗಿ ರಾಮಧುನವನ್ನು ಪಠಿಸುವದರಿಂದ ಸದ್ಯದಲ್ಲಿ ಎಲ್ಲೆಲ್ಲಿಯೂ ಕಾಣುತ್ತಿರುವ ಅನರ್ಥವು ಮಾಯವಾಗಿ ಶಾಶ್ವತವಾದ ಶಾಂತಿ ಮತ್ತು ಸಮೃದ್ಧಿಯುಂಟಾಗುವದೆಂದು ನಾನು ನಿಃಸಂಶಯವಾಗಿ ಹೇಳಬಲ್ಲೆ. ಇದರಿಂದ ಪಂಜಾಬದಲ್ಲಿ ಏನು ನಡೆದಿದೆ ಎಂಬುದರ ಕಡೆಗೆ ನನ್ನ ಲಕ್ಷ್ಯ ಎಳೆಯುತ್ತದೆ. ಆದರೆ ಇನ್ನೂ ಆ ಬಗೆಯ ಪರಿಸ್ಥಿತಿ ಬಂದಿಲ್ಲ. ಹಿಂದುಗಳು ಲಾಹೋರನ್ನು ಮುಸಲ್ಮಾನರು ಅಮೃತಸರವನ್ನು ಬಿಟ್ಟು ಹೊರಡುತ್ತಿರುವರೆಂಬದನ್ನು ಕೇಳಿ ನನಗೆ ವಿಷಾದವಾಗುತ್ತದೆಯಲ್ಲದೆ ನಾಚಿಕೆಯೂ ಎನಿಸುತ್ತದೆ. ಹಿಂದುಗಳು ಮತ್ತು ಶೀಖರು ಮುಸಲ್ಮಾನರನ್ನು ನಂಬದಿರುವದು ಮತ್ತು ಮುಸಲ್ಮಾನರು ಹಿಂದುಗಳನ್ನು ಹಾಗು ಶೀಖರನ್ನು ನಂಬದಿರುವದು ವಿಷಾದಕರವಾಗಿದೆ. ಹಿಂದು ಮುಸಲ್ಮಾನ ಶೀಖ ಧುರೀಣರು ಈಗಲೆ ಹೊರಹೋಗುವದನ್ನು ತಡೆಯುವರೆಂದು ಆಶಿಸಲಾಗಿದೆ.

## ಖರಗಪುರ

ಖರಗಪುರದಿಂದ ಕೆಲ ಮುಸಲ್ಮಾನರು ತಮ್ಮ ಭೆಟ್ಟಿಗೆ ಬಂದುದನ್ನು ಗಾಂಧೀಜಿಯವರು ಅನಂತರ ಉಲ್ಲೇಖಿಸಿದರು. ಈಗ ಅಲ್ಲಿ ಶಾಂತತೆ ನೆಲೆಸಿದ್ದರೂ ಅದು ಹಾಗೆಯೆ ಉಳಿಯುವದೆಂಬ ಬಗ್ಗೆ ಯಾರಿಗೂ ಖಾತ್ರಿಯಿಲ್ಲ. ಹಿಂದು ಅಧಿಕಾರಿಯು ಅಲ್ಲಿ ಪಕ್ಷಪಾತವನ್ನು ತೋರಿಸಿದನೆಂದು ಅವರ ತಕರಾರು. ವಸ್ತುಸ್ಥಿತಿ ಹಾಗಿರಲಿಕ್ಕಿಲ್ಲೆಂದು ನಾನು ಆಶಿಸುವೆ. ಕೆಲಸ ಮಾಡುವಾಗ ಯಾವ ಅಧಿಕಾರಿಯೂ ಹಿಂದು ಮುಸಲ್ಮಾನ ಇಲ್ಲವೆ ಶೀಖ ಜಾತಿಗೆ ಸೇರಿದವನಲ್ಲೆಂಬದಾಗಿ ನಾನು ಎಚ್ಚರಿಕೆ ಕೊಡಲಿಕ್ಕೆ ಬೇಕಾಗಿದೆ. ಅಧಿಕಾರಿಗಳಂತೆ ಪೋಲೀಸರು ಕೆಲಸ ಮಾಡುವಾಗ ಯಾವ ಜಾತಿಗೂ ಸೇರಿದವರಲ್ಲೆಂದು ನಾನು ಒತ್ತಿ ಹೇಳಲಿಕ್ಕೆ ಬೇಕಾಗಿದೆ. ಯಾವದೇ ಜಾತಿಪಂಗಡಗಳನ್ನು ನೋಡದೆ ದುಃಖಿತ ಜನರಿಗೆಲ್ಲ ಸಂಪೂರ್ಣ ಸಂರಕ್ಷಣೆ ಕೊಡುವ ಪ್ರತಿಜ್ಞಾಬದ್ಧ ಹಿಂದೀಯರವರು. ಹೀಗೆ ಅವರು ಪ್ರತಿಜ್ಞಾಬದ್ಧರಾಗಿ ಕಾರ್ಯ ಮಾಡುವದರಿಂದ ಅವರೇನು ಕಡಮೆ ತರಗತಿಯ ಹಿಂದು, ಮುಸಲ್ಮಾನ ಇಲ್ಲವೆ ಶೀಖರಾಗದೆ ಶ್ರೇಷ್ಠ ತರಗತಿಯ ಹಿಂದು ಮುಸಲ್ಮಾನ ಶೀಖರಾಗಿಯೆ ಉಳಿಯುವರು.

## ಧರ್ಮ

ಧರ್ಮವು ವ್ಯಕ್ತಿಗತವಾದುದು ವ್ಯಕ್ತಿಗತವಾಗಿಯೆ ಅದನ್ನು ಇಟ್ಟುಕೊಳ್ಳುವಲ್ಲಿ ನಾವು ಯಶಸ್ವಿಯಾದರೆ ನಮ್ಮ ರಾಜಕೀಯ ಜೀವನವು ಸುಸೂತ್ರ ಸಾಗುವದು. ಸಾಮಾಜಿಕ ಮತ್ತು ರಾಜಕೀಯ ಜೀವನದಲ್ಲಿ ನಾವು ಯೋಗ್ಯ ರೀತಿಯಿಂದ ಕಾರ್ಯ ಮಾಡಿ ಬಂಧುತ್ವವನ್ನು ತೋರಿಸದಿದ್ದರೆ ವಿಶ್ವಬಂಧುತ್ವದ ಬಗ್ಗೆ ಈಗ ತೋರಿಸುತ್ತಿರುವ ಔದಾರ್ಯವೆಲ್ಲ ಕೇವಲ ತೋರಿಕೆಯದಾಗಿ ಪರಿಣಮಿಸುವದು. ಸರಕಾರೀ ಅಧಿಕಾರಿಗಳು ಮತ್ತು ಸಾರ್ವಜನಿಕರು ಕೂಡಿಯೆ ಹೊಣೆಯನ್ನು ಹೊತ್ತುಕೊಂಡು ಲೌಕಿಕ ರಾಜ್ಯವನ್ನು ಕಟ್ಟಲಿಕ್ಕೆ ಪ್ರಾಮಾಣಿಕವಾಗಿ ಕಾರ್ಯ ಮಾಡಿದ್ದಾದರೆ ಮಾತ್ರ ಇಡೀ ಜಗತ್ತಿನಲ್ಲಿ ವೈಭವಶಾಲಿಯಾಗುವ ಹೊಸ ಹಿಂದುಸ್ತಾನವನ್ನು ನಾವು ಕಟ್ಟಬಲ್ಲೆವು.

## "ಅಲ್ಲಾ ಹೋ ಅಕಬರ"

ಕೆಲ ಹಿಂದೂ ಜನರು ಆಕ್ಷೇಪಿಸಿದ ಅಲ್ಲಾ ಹೋ ಅಕಬರ ಎಂಬ ಘೋಷಣೆಯ ಕಡೆಗೆ ಗಾಂಧೀಜಿ ನೊದಲು ಹೊರಳಿದರು. ಈ ಘೋಷಣೆಗಿಂತ ಶ್ರೇಷ್ಠವಾದ ಘೋಷಣೆಯನ್ನು ಜಗತ್ತು ಈ ವರೆಗೆ ಕಂಡುಹಿಡಿದಿಲ್ಲೆಂದು ಕದಾಚಿತ್ ಹೇಳಬಹುದೆಂದು ಗಾಂಧೀಜಿ ಅಭಿಪ್ರಾಯಪಟ್ಟರು ಅಂತಃಕರಣವನ್ನು ಕಲಕುಮಲಕು ಮಾಡುವ ಧಾರ್ಮಿಕ ಘೋಷಣೆಯದು. ಪರಮಾತ್ಮನೊಬ್ಬನೇ ಶ್ರೇಷ್ಠ ಎಂಬುದೆ ಅದರ ಅರ್ಥ. ಆ ಅರ್ಥದಲ್ಲಿ ಎಷ್ಟೊಂದು ಔದಾರ್ಯವಿದೆ? ಅರಬ್ಬಿ ಭಾಷೆಯಲ್ಲಿ ಅದು ಇದ್ದ ಮಾತ್ರಕ್ಕೆ ಆಕ್ಷೇಪಾರ್ಹವಾಯಿತೆ? ಹಿಂದುಸ್ತಾನದಲ್ಲಿ ಅದರ ಹಿನ್ನೆಲೆ ನಿರ್ದುಷ್ಟವಾಗಲಿಲ್ಲೆಂಬದನ್ನು ನಾನು ಒಪ್ಪುತ್ತೇನೆ. ಕೆಲಸಲ ಮುಸಲ್ಮಾನರು ಆ ಘೋಷಣೆಯನ್ನು ಮಾಡುತ್ತ ಮಸೀದೆಗಳಿಂದ ರೊಚ್ಚಿನಿಂದ ಹೊರಬಿದ್ದು ಹಿಂದುಗಳನ್ನು ಛಲಿಸಿದ್ದರಿಂದ ಆ ಘೋಷಣೆ ಆಗಾಗ ಹಿಂದುಗಳನ್ನು ಭಯಭೀತ ಮಾಡುವದುಂಟು. ಆ ಘೋಷಣೆ ಮೂಲತಃ ಈ ರೀತಿ ದುಷ್ಟವಾಗಿಲ್ಲೆಂಬುದನ್ನು ನಾನು ಒಪ್ಪುತ್ತೇನೆ. ನನಗೆ ಗೊತ್ತಿದ್ದರ ಮಟ್ಟಿಗೆ, ಜಗತ್ತಿನ ಬೇರೆ ಭಾಗದಲ್ಲಿ ಈ ಘೋಷಣೆಯ ಹಿನ್ನೆಲೆ ಇಂತು ಅನಿಷ್ಟಕರವಾಗಿಲ್ಲೆಂದೂ ನನಗೇ ಗೊತ್ತುಂಟು. ಹಿಂದು ಮುಸಲ್ಮಾನರಲ್ಲಿ ಶಾಶ್ವತವಾದ ಮಿತ್ರತ್ವವು ಆಗಬೇಕಾಗಿದ್ದರೆ ತಮ್ಮ ಮುಸಲ್ಮಾನರ ಜತೆಯಲ್ಲಿಯೆ ಹಿಂದುಗಳು ಈ ಘೋಷಣೆಯನ್ನು ಮಾಡುವದಕ್ಕೆ ಹಿಂದೆ ಮುಂದೆ ನೋಡಬಾರದು. ಪರಮಾತ್ಮನಿಗೆ ಅನಂತ ನಾಮಗಳಿವೆ. ಅಲ್ಲದೆ ಅನಂತ ಗುಣಪರಿಪೂರ್ಣನವನು. ರಾಮ, ರಹೀಮ, ಕೃಷ್ಣ, ಕರೀಮ ಮೊದಲಾದವೆಲ್ಲ ಒಬ್ಬ ಪರಮಾತ್ಮನನ ನಾಮಗಳೆ. ಸತ್ ಶ್ರೀ ಅಕಲ ಎಂಬ ಘೋಷಣೆ ಅದೂ ಅಷ್ಟೇ ಪ್ರಭಾವಶಾಲಿಯಾದ ಘೋಷಣೆಯು. ಯಾವನೊಬ್ಬ ಹಿಂದು ಇಲ್ಲವೆ ಮುಸಲ್ಮಾನನು ಆ ಘೋಷಣೆಯನ್ನು ಮಾಡಲು ಹಿಂದೆ ಮುಂದೆ ನೋಡತಕ್ಕದ್ದೆ? ಪರಮಾತ್ಮನೊಬ್ಬನೆ ಇದ್ದು ಬೇರೆ ಯಾವ ಪದಾರ್ಥವೂ ಇರಲಿಲ್ಲ ಎಂಬುದೇ ಅದರ ಅರ್ಥ. ರಾಮಧುನದ ಅರ್ಥವೂ ಹಾಗೆಯೆ ಇದೆ.

## ವಂದೇಮಾತರು

ಅನಂತರ ಅವರು ವಂದೇಮಾತರಂದತ್ತ ಹೊರಳಿದರು. ಅದೇನು ಧಾರ್ಮಿಕ ಘೋಷಣೆಯಲ್ಲ. ಅದು ವಿಶುದ್ಧ ರಾಜಕೀಯ ಘೋಷಣೆಯು. ಕಾಂಗ್ರೆಸು ಅದನ್ನು ಪರೀಕ್ಷಿಸಬೇಕಾಗಿತ್ತು. ಆ ಬಗ್ಗೆ ಗುರುದೇವನ ಅಭಿಪ್ರಾಯ ಕೇಳಲಾಗಿತ್ತು. ಅದರ ಪ್ರಾರಂಭದ ಪದ್ಯಗಳಿಗೆ ಯಾವದೇ ಆಕ್ಷೇಪವಿಲ್ಲೆಂದು ಕಾಂಗ್ರೆಸ್ ಕಾರ್ಯ ಸಮಿತಿಯ ಹಿಂದೂ ಮುಸಲ್ಮಾನ ಸದಸ್ಯರೆಲ್ಲರೂ ನಿರ್ಣಯಕ್ಕೆ ಬಂದರು. ಆಯಾ ಯೋಗ್ಯ ಪ್ರಸಂಗದಲ್ಲಿ ಎಲ್ಲರೂ ಕೂಡಿ ಅದನ್ನು ಹಾಡಬೇಕೆಂದು ನಾನು ಬಿನ್ನವಿಸಿಕೊಳ್ಳುವೆ. ಅದು ಮುಸಲ್ಮಾನರ ಅಪಮಾನ ಇಲ್ಲವೆ ಮನನೋಯಿಸುವ ಪದ್ಯವೆಂದೂ ಆಗಲಾರದು. ರಾಜಕೀಯ ಬಂಗಾಲವನ್ನು ಎಚ್ಚರಗೊಳಿಸಿದ್ದು ಆ ಪದ್ಯ ಎಂಬದನ್ನು ನೆನಪಿಗೆ ತಂದುಕೊಳ್ಳತಕ್ಕದ್ದು. ಅನೇಕ ಬಂಗಾಲಿಗಳು ಆ ಘೋಷಣೆಯನ್ನು ಮಾಡುತ್ತಲೇ ರಾಜಕೀಯ ಸ್ವಾತಂತ್ರ್ಯಕ್ಕಾಗಿ ಆತ್ಮಾರ್ಪಣ ಮಾಡಿದ್ದುಂಟು. ಹಿಂದ ಮಾತೃಭೂಮಿಯ ಗೀತವೆಂದು ನಾನು ಆ ಬಗ್ಗೆ ಒಳ್ಳೇ ಅಭಿಮಾನ ತಾಳಿದರೂ ಲೀಗಿನ ಪನ್ನ ಮಿತ್ರರು.ಆ ಬಗ್ಗೆ ತಮ್ಮ ಪರಿಷ್ಕರನ್ನು ಕೇಳಿಕೊಳ್ಳಬೇಕೆಂದು ಹೇಳಬಯಸುವೆ. ಹಿಂದು ಮುಸಲ್ಮಾನರಲ್ಲಿ ಮಿತ್ರತ್ವವು ಹಬ್ಬುತ್ತಿರುವಾಗ ಮುಸ್ಲಿಂ ಲೀಗಿನ ಪರಿಷ್ಕರು ಈ ಗೀತದ ನಿರ್ದಿಷ್ಟ ಸಾಲುಗಳ ಬಗ್ಗೆ ಆಕ್ಷೇಪಿಸಿದ್ದಾದರೆ ನನಗೆ ಆಶ್ಚರ್ಯವೆನಿಸದಿರದು. ಹಿಂದುಸ್ತಾನದ ಉಳಿದ ಭಾಗವು ಇದನ್ನು ಸುಪ್ರತಿಷ್ಠಿಯಲ್ಲಿರುವಾಗ ಈ ಗೀತವು ಬಂಗಾಲದ ರಾಷ್ಟ್ರೀಯ ಗೀತ ಮತ್ತು ಘೋಷಣೆಯಾಗಿ ಅದನ್ನು ರಕ್ಷಿಸಿತು. ಅಲ್ಲದೆ ನನಗೆ ಗೊತ್ತಿದ್ದರ ಮಟ್ಟಿಗೆ ಬಂಗಾಲದಲ್ಲಿಯ ಹಿಂದು ಮುಸಲ್ಮಾನರಿಬ್ಬರೂ ಈ ಗೀತವನ್ನು ಪ್ರಶಂಸಿಸಿದ್ದುಂಟು. ಆದರೆ ಯಾವದನ್ನು ಯಾರೊಬ್ಬರ ಮೇಲೆ ಒತ್ತಾಯದಿಂದ ಹೇರಬಾರದು. ಎಲ್ಲವೂ ಐಚ್ಛಿಕವಾಗಿರತಕ್ಕದ್ದೆಂಬುದು ನಿಃಸಂದೇಹವಾಗಿದೆ. ಈ ಮಾತನ್ನು ನಿನ್ನೆಯೆ ಹೇಳಿರುವೆನಷ್ಟೆ. ಆದರ್ಶ ಮಿತ್ರತ್ವದಲ್ಲಿ ಯಾವದನ್ನೂ ಒತ್ತಾಯದಿಂದ ಹೇರಲಾಗದು.

## ಶಾಹೀದ ಸಾಹೇಬ

ಅವರು ಉಲ್ಲೇಖಿಸಿದ ಮೂರನೇ ಮಾತೆಂದರೆ ನನ್ನ ಗೆಳೆಯ ಸುರ್ಹವರ್ದಿಯವರ ಬಗ್ಗೆ. ಶಾಹೀದ ಸಾಹೇಬರು ವಿಶ್ವಾಸಕ್ಕೆ ಯೋಗ್ಯರಾಗಿಲ್ಲೆಂದು ಮುಖತಃ ಮತ್ತು ಪತ್ರಮೂಲಕ ತಕರಾರುಗಳು ಬರುತ್ತಿವೆ. ಅವರ ಮಂತ್ರಿತ್ವದಲ್ಲಿ ಹಿಂದುಗಳಿಗೆ ವಿಪರೀತ ಹಾನಿ ಸಂಭವಿಸಿತೆಂದೂ ತಕರಾರುಗಳು ಬಂದಿವೆ. ಈ ದೂರು ಏನೂ ಹೊಸತಲ್ಲ. ನಾವು ಸಂಯುಕ್ತ ರೀತಿಯಿಂದ ಕಾರ್ಯಪ್ರಾರಂಭ ಮಾಡುವ ಮೊದಲೆ ಈ ದೂರುಗಳ ಬಗ್ಗೆ ನನಗೆ ಗೊತ್ತಿದ್ದಿತು. ಆದರೆ ನಮ್ಮೀ ಸಂಯುಕ್ತ ಪ್ರಯತ್ನವು ಅನಿರೀಕ್ಷಿತವಾಗಿ ಶುಭ ಪರಿಣಾಮವನ್ನುಂಟು ಮಾಡಹತ್ತಿದೆಂದು ತೋರುತ್ತದೆ. ನನಗೆ ಆ ಬಗ್ಗೆ ಎಚ್ಚರಿಕೆ ಕೊಟ್ಟವರ ಸಲುವಾಗಿ ನಾನು ಅದರ ವಿಚಾರ ಮಾಡಬೇಕಾಗಿದೆ. ನನ್ನ ಗೆಳೆಯನೊಡನೆ ವಿಚಾರಮಾಡುವ ಸಮಯ ಕೂಡ ನನಗಿರಲಿಲ್ಲ. ನಾನೇನು ಆತುರನಾಗಬೇಕಿಲ್ಲ. ವಿಶ್ವಾಸವಿಡುವ ಸ್ವಭಾವ ನನ್ನದು. ಒಳ್ಳೆ ನಿಷ್ಠೆಯಿಂದ ವಿಶ್ವಾಸವಿಡುವದರಿಂದ ನನಗೆಂದೂ ಹಾನಿಯಾಗಿಲ್ಲ. ನಾನು ಸತ್ಯವನ್ನು ಹೇಳುವದಿಲ್ಲೆಂದು ಸಿದ್ಧವಾಗುವ ವರೆಗೆ ನನ್ನ ಮಾತಿನ ಮೇಲೆ ಎರಡನೆಯವರು ವಿಶ್ವಾಸವಿಡಬೇಕೆಂದು ನಾನು ಅಪೇಕ್ಷಿಸುತ್ತಿರುವಂತೆ ಎರಡನೆಯವರ ಮಾತಿನ ಮೇಲೆಯೂ ನಾನು ವಿಶ್ವಾಸವಿಡುವೆನು. ಮಾನವರಲ್ಲಿ ಪ್ರೀತಿಯನ್ನಿಡುವ ಸನ್ಮಾನ್ಯ ಮಾರ್ಗವಿದೊಂದೇ ಎಂದು ನನ್ನ ಅಭಿಪ್ರಾಯ. ವಿಶ್ವಾಸವಿಡುವದರಿಂದ ಮನುಷ್ಯನೆಂದೂ ಹಾನಿಗೊಳಗಾಗುವದಿಲ್ಲೆಂದು ನನ್ನ ಅಭಿಪ್ರಾಯ, ಮೋಸಗಾರನಿಗೆ ಯಾವಾಗಲೂ ಹಾನಿಯೆಂದೂ ನನ್ನ ಅಭಿಪ್ರಾಯ. ತನ್ನ ದುಷ್ಕೃತ್ಯಗಳಿಗಾಗಿ ಅವನು ಭಗವಂತನ ಮುಂದೆ ನಿಲ್ಲಬೇಕಾಗುತ್ತದೆ. ನಾವಿಬ್ಬರೂ ಕೂಡಿಯಿದ್ದ ಕೆಲ ದಿನಗಳ ಅನುಭವದಿಂದ ಹೇಳುವದಾದರೆ ಆ ಮಿತ್ರತ್ವಕ್ಕಾಗಿ ವಿಷಾದ ಪ್ರದರ್ಶಿಸುವ ಕಾರಣ ನನಗೇನೂ ಉಂಟಾಗಲಿಲ್ಲೆಂದು ಹೇಳಬಲ್ಲೆ. ಅವರ ಸಹಕಾರವಿಲ್ಲದಿದ್ದರೆ ನನ್ನಿಂದ ಯಾವ ಕಾರ್ಯವೂ ಆಗುತ್ತಿರಲಿಲ್ಲೆಂದು ಮಾತ್ರ ನಾನು ನಿಮಗೆ ಹೇಳಬಲ್ಲೆ.

## ಪಂಜಾಬ

ಅನಂತರ ಗಾಂಧೀಜಿ ಪಂಜಾಬಿಗಳ ಶಿಷ್ಟಮಂಡಳದ ಬಗ್ಗೆ ಉಲ್ಲೇಖಿಸಿದರು. ಪಂಜಾಬದಲ್ಲಿ ನಡೆಯುತ್ತಿದ್ದುದರ ಭೀಕರ ಚಿತ್ರವನ್ನು ಅವರು ರೇಖಿಸಿದರು. ತಮಗೆ ಬಂದ ವರದಿಗಳ ಮೇಲಿಂದ ಅವರು ಕೂಡಲೆ ಪಂಜಾಬಕ್ಕೆ ಬರಬೇಕೆಂದು ಗಾಂಧೀಜಿಗೆ ಬಿನ್ನವಿಸಿಕೊಂಡರು. ಪಂಜಾಬದಲ್ಲಿ ನಡೆದ ಕೊಲೆ ಕೊಳ್ಳೆಗಳನ್ನು ನೆನೆದರೆ ಬಂಗಾಲದಲ್ಲಿ ಸಂಭವಿಸಿದ್ದು ಏನೂ ಅಲ್ಲ ಎಂದು ಅವರ ಅಭಿಪ್ರಾಯವಾಗಿತ್ತು. ಲಾಹೋರವು ಹಿಂದು ಮತ್ತು ಶೀಖರಿಂದ ಬಹುಶಃ ಬರಿದುಮಾಡಲ್ಪಟ್ಟಂತಾಗಿದೆ. ಅಮೃತಸರದಲ್ಲಿ ಮುಸಲ್ಮಾನರು ಇಲ್ಲದಂತಾಗಿರುವರೆಂದು ಅವರು ಹೇಳಿದರು. ಈ ಸುದ್ದಿಯು ಅತಿಶಯೋಕ್ತಿ ಪೂರ್ಣವಾಗಿರಲೆಂದು ಗಾಂಧೀಜಿ ಆಶಿಸಿದರು. ಕಲಕತ್ತೆಯಲ್ಲಿಯ ಪಂಜಾಬಿಗಳಿಗೆ ಪಂಜಾಬದ ನಿಜವಾದ ಪರಿಸ್ಥಿತಿ ತಿಳಿದಿರಲಿಕ್ಕಿಲ್ಲೆಂದು ಅವರು ಅಭಿಪ್ರಾಯಪಟ್ಟರು. ಅದು ಹೇಗೇ ಇದ್ದರೂ ಕಲಕತ್ತೆಯಲ್ಲಿಯ ಹಿಂದು-ಮುಸಲ್ಮಾನ-ಶೀಖರು ನಿಜವಾಗಿ ಮಿತ್ರತ್ವ ಬಂಧನದಿಂದ ಬದ್ಧರಾಗಿದ್ದಾರೆ ಅವರೆಲ್ಲರೂ

—೧೦ನೇ ಪುಟಕ್ಕೆ

# ಕರ್ನಾಟಕ

## ಧಾರವಾಡ

ಬ್ಯಾಡಗಿಯಲ್ಲಿ ಗೃಹರಕ್ಷಕದಲ ಸ್ಥಾಪಿಸಲಾಯಿತು. ಎಂ. ಆರ್. ಚಿಟಗೇರಿಯವರು ದಳನಾಯಕರು, ಶ್ರೀ ಎಸ್. ಕೆ. ಶೆಟ್ಟರ ಸಿ. ಎಂ. ಪಾಟೀಲ ಮತ್ತು ಎ. ಎ. ಬಾಗಲಕೋಟಿಯವರು ಸಲಹೆಗಾರರಾಗಿ ಆರಿಸಲ್ಪಟ್ಟರು.

ಧಾರವಾಡದ ಕರ್ನಾಟಕ ಕಾಲೇಜಿನ ವಿಜ್ಞಾನ ಸಂಸ್ಥೆಯ ಪರವಾಗಿ ೨೫ ನೇ ತಾರೀಖು ಪ್ರೊ. ಗಿಡಿಯನ್ಸ್‌ರ ಅಧ್ಯಕ್ಷತೆಯಲ್ಲಿ ಸಭೆ ಸೇರಿತ್ತು. ಒಕ್ಕಲತನ ಕಾಲೇಜಿನ ಪ್ರಿನ್ಸಿಪಾಲರಾದ ದೇಸಾಯಿ ಇವರು ಮಾತಾಡುತ್ತ ಭಾರತಕ್ಕೆ ಅನ್ನ ಮತ್ತು ಬಟ್ಟೆಯ ಕೊರತೆ ಭೀಕರವಾಗಿದ್ದು ಅದನ್ನು ನೀಗಬೇಕಾದರೆ ಒಕ್ಕಲತನದ ಅಭಿವೃದ್ಧಿಯಾಗಬೇಕು. ಇದಕ್ಕಾಗಿ ಸುಶಿಕ್ಷಿತರು ಹೆಚ್ಚಾಗಿ ಒಕ್ಕಲತನದಲ್ಲಿ ಆಸ್ಥೆ ವಹಿಸಬೇಕೆಂದು ಮುಂತಾಗಿ ಹೇಳಿದರು.

ಧಾರವಾಡ ಜಿಲ್ಲಾ ಮ್ಯಾಜಿಸ್ಟ್ರೇಟರು ಒಂದು ಪ್ರಕಟನೆ ಹೊರಡಿಸಿ ಅಗಸ್ಟ ತಿಂಗಳ ಮೊದಲನೆ ಪಕ್ಷದಲ್ಲಿ ಗೋದಿ ಅಥವಾ ಗೋದಿಯ ಹಿಟ್ಟು ಸೀದಾದಲ್ಲಿ ಒಯ್ಯದೆ ಇರುವ ಸೀದಾಕ್ಷೇತ್ರ ಅಥವಾ ಹಳ್ಳಿಗಳಲ್ಲಿ ವಾಸಿಸುವ ಎಲ್ಲ ಸೀದಾ ಕಾರ್ಡುಧಾರಿಗಳು ಅಗಸ್ಟ ತಿಂಗಳ ೨ ನೇ ಪಕ್ಷದಲ್ಲಿ ಆ ಸೀದಾ ಸ್ವೀಕರಿಸಬಹುದೆಂದು ಪ್ರಸಿದ್ಧಿಸಿದ್ದಾರೆ.

ಹುಬ್ಬಳ್ಳಿಯ ಒಂದು ಉಪಹಾರ ಗೃಹದವರಿಂದ ಲಂಚ ತೆಗೆದುಕೊಂಡದ್ದಕ್ಕಾಗಿ ಹುಬ್ಬಳ್ಳಿಯ ನಗರ ಸಭೆಯ ಅಂಗಡಿ ಗುಮಾಸ್ತರ ಇನಸ್ಪೆಕ್ಟರರಾದ ಶ್ರೀ ಎ ಎ ಮುಂಡಿಯವರಿಗೆ ೧೫೦ ರೂ. ದಂಡ ಇಲ್ಲದಿದ್ದರೆ ಒಂದು ವಾರ ಸಶ್ರಮ ಶಿಕ್ಷೆ ವಿಧಿಸಲಾಗಿದೆ.

ನಾಲ್ಕು ಚೀಲ ೬೪ ಸೇರು ಜೋಳದ ಸಂಗ್ರಹವನ್ನು ತಿಳಿಸದೆ ಇಟ್ಟುಕೊಂಡದ್ದಕ್ಕಾಗಿ ಹುಬ್ಬಳ್ಳಿಯ ಹಾಯಸ್ಕೂಲ ಶಿಕ್ಷಕರೊಬ್ಬರಿಗೆ ೫೦ ರೂಪಾಯಿ ದಂಡವಾಗಿದೆ. ದಂಡ ಕೊಡದಿದ್ದರೆ ಒಂದು ತಿಂಗಳ ಸಶ್ರಮ ಶಿಕ್ಷೆ ಅನುಭವಿಸಬೇಕು ೧೨ ಚೀಲ ೧೪೦ ಪೌಂಡ ಹತ್ತಿಕಾಳಿನ ಸಂಗ್ರಹವನ್ನು ತಿಳಿಸದೆ ಇಟ್ಟುಕೊಂಡದ್ದಕ್ಕಾಗಿ ಇವರಿಗೆ ೧೦ ರೂಪಾಯಿ ಮೊದಲಾದಂಡ ವಿಧಿಸಲಾಗಿತ್ತು.

ಹತ್ತಿಕಾಳಿನ ಸದ್ಯದ ಸೀದಾವನ್ನು ಮುಮ್ಮಡಿ ಮಾಡಬೇಕೆಂದೂ ಎತ್ತುಗಳಂತೆ ಎಮ್ಮೆಗಳಿಗೂ ಸೀದಾ ಕೊಡಬೇಕೆಂದೂ ನಿರ್ಧರಿಸಲಾಗಿದೆಂದು ಧಾರವಾಡ ಜಿಲ್ಲಾ ಮ್ಯಾಜಿಸ್ಟ್ರೇಟರು ಪ್ರಕಟಿಸಿದ್ದಾರೆ. ಹಿಂಡುವ ಆಕಳಿಗೆ ಒಂದು ವರ್ಷಕ್ಕೆ ೧೨೬ ಪೌಂಡು, ಹಿಂಡುವ ಎಮ್ಮೆಗೆ ೧೬೮ ಪೌಂಡು ಹೂಡುವ ಎತ್ತು ಹಾಗು ಎಮ್ಮೆಗೆ ರೋಣ, ಗದಗ, ನವಲಗುಂದ ಹುಬ್ಬಳ್ಳಿ ಹಾವೇರಿ ರಾಣೇಬೆನ್ನೂರ ತಾಲೂಕಗಳಲ್ಲಿ ಹಾಗು ನರಗುಂದ ಮುಂಡರಗಿ ಪೇಟಾಗಳಲ್ಲಿ ೩೬೮ ಪೌಂಡು, ಧಾರವಾಡ ಕಲಘಟಗಿ ಶಿಗ್ಗಾವಿ ಹಾನಗಲ್ಲ ಹಾಗು ಹಿರೇಕೆರೂರ ತಾಲೂಕಗಳಲ್ಲಿ ೨೮೪ ಪೌಂಡು ಕೊಡಲಾಗುವದು.

## ಬೆಳಗಾವಿ

ಬೆಳಗಾವಿ ಜಿಲ್ಲೆಯ ಉತ್ತರ ಭಾಗದಲ್ಲಿ ಮರಾಠಿ ಪ್ರಚಾರ ನಡೆದದ್ದು ಜಿಲ್ಲಾ ಸ್ಕೂಲ ಬೋರ್ಡಿನ ಸಭೆಯಲ್ಲಿ ಬೆಳಕಿಗೆ ಬಂದಿತು. ಚಿಕ್ಕೋಡಿ ತಾಲೂಕಿನಲ್ಲಿ ಒಂದು ಮೂರಾಂಶ ಮರಾಠಿ ಶಾಲೆಗಳು, ಎರಡು ಮೂರಾಂಶ ಕನ್ನಡ ಶಾಲೆಗಳೆಂದ ಹೇಳಲಾಯಿತು. ಆದರೆ ಅಲ್ಲಿ ನೇಮಿಸಿದ ನಾಲ್ವರು ಅಟೆಂಡೆನ್ಸ ಅಧಿಕಾರಿಗಳಲ್ಲಿ ಒಬ್ಬರಿಗೆ ಅರ್ಧಮರ್ಧ ಕನ್ನಡ ಬರುತಿದ್ದು ಉಳಿದ ಮೂವರೂ ಮರಾಠಿಗರಿರುವರೆಂದು ಹೇಳಲಾಯಿತು. ಇದರಿಂದ ಮರಾಠಿ ಪ್ರಚಾರಕ್ಕೆ ಬಹಳ ಅವಕಾಶ ದೊರೆಯುವದೆಂದು ಶ್ರೀ ಕಲ್ಲಯಸ್ವಾಮಿಯವರು ಹೇಳಿದರು. ಇನ್ನು ಮುಂದೆಯಾದರೂ ಶಾಲೆಗಳ ಪ್ರಮಾಣಕ್ಕನುಸಾರವಾಗಿ ಅಟೆಂಡೆನ್ಸ ಅಧಿಕಾರಿಗಳನ್ನು ನೇಮಿಸಬೇಕೆಂದು ಕೇಳಿಕೊಂಡದ್ದಕ್ಕೆ ಹಾಗೆ ಮಾಡಲಾಗುವದೆಂದು ಎ. ಓ: ರವರು ಹೇಳಿದರು.

ಬಿ. ಎಸ್. ಪಾಟೀಲರು ಕಿರಿಯ ಕುರುಂದವಾಡ, ಸಂಸ್ಥಾನದ ಮಂತ್ರಿಗಳಾಗಿ ನೇಮಿಸಲ್ಪಟ್ಟಿದ್ದಾರೆ. ಇನ್ನೊಬ್ಬ ಮಂತ್ರಿಯ ನೇಮಕವಾಗುವವರೆಗೆ ಎಲ್ಲ ಮಂತ್ರಿಮಂಡಲದ ಕೆಲಸವನ್ನು ಪಾಟೀಲರೊಬ್ಬರೆ ನೋಡಿಕೊಳ್ಳುವರು.

ಮುಗುಟಖಾನ ಹುಬ್ಬಳ್ಳಿಯಲ್ಲಿ ಹಿಂದೆಂದೂ ಕಾಣದ ಉತ್ಸವದಿಂದ ಸ್ವಾತಂತ್ರ್ಯ ದಿನವನ್ನು ಆಚರಿಸಲಾಯಿತು. ೧೪ ನೇ ತಾರೀಖು ರಾತ್ರಿಯಲ್ಲಿಯೆ ಚಾವಡಿಯ ಮೇಲೆ ರಾಷ್ಟ್ರಧ್ವಜ ಏರಿಸಲಾಯಿತು. ಮರುದಿನ ಪ್ರಭಾತ ಸಂಚಾರ ನಡೆದು ಸ್ವಾತಂತ್ರ್ಯ ಪ್ರತಿಜ್ಞೆ ತೆಗೆದುಕೊಳ್ಳಲಾಯಿತು. ಮಧ್ಯಾಹ್ನ ಕನ್ನಡ ಗಂಡುಮಕ್ಕಳ ಶಾಲೆಯಲ್ಲಿ ಗಾಂಧಿಜಿಯವರ ಭಾವಚಿತ್ರದ ಅನಾವರಣವಾಯಿತು. ಹರಿಜನ ಹುಡುಗರಿಗೆ ಬಟ್ಟೆ ಕೊಡಲಾಯಿತು. ಊರಲ್ಲೆಲ್ಲ ಧ್ವಜಗಳು ಏರಿಸಲ್ಪಟ್ಟಿದ್ದವು. ಸಾಯಂಕಾಲ ಸಾರ್ವಜನಿಕ ಭಾಷಣಗಳಾಗಿ ರಾತ್ರಿ ೮ ಗಂಟೆಗೆ ಸಭಾ ವಿಸರ್ಜನೆಯಾಯಿತು.

## ವಿಜಾಪುರ

ಮುಂಬಯಿ ಹಾಯಕೋರ್ಟಿನ ಹಿಂದಿನ ಸರಕಾರೀ ವಕೀಲರೊಬ್ಬರು ಆ ಹಾಯಕೋರ್ಟಿನ ನ್ಯಾಯಾಧೀಶರಾಗಿದ್ದಾರೆಂದು ವಿಶ್ವಸನೀಯವಾಗಿ ತಿಳಿಯುತ್ತದೆ.

ಸಿಮೆಂಟ ಕಾರಖಾನೆಗೆ ಭೆಟ್ಟಿ ಕೊಡಲು ಡಾಕ್ಟರ ಕೆಂಡುಲಕರರು ಬಾಗಲಕೋಟೆಗೆ ಬಂದಿದ್ದರು.

ಕರ್ನಾಟಕ ವಿಶ್ವವಿದ್ಯಾಲಯ ಸಮಿತಿಯ ಸಭೆ ವಿಜಾಪುರದಲ್ಲಿ ಇದೇ ೨೩ ಮತ್ತು ೨೪ ಕ್ಕೆ ನ್ಯಾಯಮೂರ್ತಿ ನಾರಾಯಣರಾವ ಲೋಕೂರರ ಅಧ್ಯಕ್ಷತೆಯಲ್ಲಿ ಸೇರಿತ್ತು. ಪ್ರಶ್ನಾವಲಿಗೆ ಬಂದ ಉತ್ತರಗಳನ್ನು ಪರಿಶೀಲಿಸಲಾಯಿತು. ಸಾಕ್ಷಿ ತೆಗೆದುಕೊಳ್ಳಲಿಕ್ಕೆ ಅನುಕೂಲವಾಗಬೇಕೆಂದು ೬ ವಿಭಾಗಗಳನ್ನು ಕಲ್ಪಿಸಿ ಆಯಾ ವಿಭಾಗಗಳಿಗೆ ಭೆಟ್ಟಿ ಕೊಡಲು ಉಪ ಸಮಿತಿಗಳನ್ನು ರಚಿಸಲಾಯಿತು. ಅಕ್ಟೋಬರ ೧೬ ರ ವರೆಗೆ ಸಮಿತಿಯು ಮುಂದರಿಸಲ್ಪಟ್ಟಿತು. ಪ್ರಿ. ಗೋಕಾಕರನ್ನು ಸಮಿತಿಯಲ್ಲಿ ಸೇರಿಸಿಕೊಳ್ಳಲಾಗಿದೆ.

ಇದೇ ೬ ನೇ ತಾರೀಖು ಬಾಗಲಕೋಟೆಯ ಬಸವೇಶ್ವರ ಕಾಲೇಜಿನಲ್ಲಿ ಸಾಯಂಕಾಲ ೬ ಗಂಟೆಗೆ ಕ. ಪ್ರಾ. ಕಾಂ. ಸಮಿತಿಯ ಮತ್ತು ಕರ್ನಾಟಕ ಏಕೀಕರಣ ಕ್ರಿಯಾ ಸಮಿತಿಯ ಸಂಯುಕ್ತ ಸಭೆಯನ್ನು ಕರೆಯಲಾಗಿದೆ. ಸಂಬಂಧಪಟ್ಟ ಸದಸ್ಯರು ಬರಬೇಕಾಗಿ ಬಿನ್ನವಿಸಲಾಗಿದೆ.

ವಿಜಾಪುರದಿಂದ ೧೮ ಮೈಲುಗಳ ಮೇಲಿರುವ ಹಲಗಣಿಯಲ್ಲಿ ಕಸ್ತೂರಬಾ ಸೇವಾ ಕೇಂದ್ರ ಸ್ಥಾಪಿತವಾಗಿದೆ. ಕರ್ನಾಟಕ ಪ್ರಾಂತಿಕ ಪ್ರತಿನಿಧಿಗಳಾದ ಶ್ರೀ ಉಮಾಬಾಯಿ ಕುಂದಾಪುರ ಇವರು ಸ್ಮಾರಕದ ಉದ್ದೇಶ ಮತ್ತು ಈ ವರೆಗೆ ನಡೆದ ಕಾರ್ಯಗಳನ್ನು ವಿವರಿಸಿದರು. ಶ್ರೀ ಜಜಾಬಾಯಿ ಪವಾರ ಮತ್ತು ವಿಮಲ ಅಂಕಲಿ ಇವರನ್ನು ಇಲ್ಲಿಯ ಕೆಲಸ ನಡೆಸಲು ಇಡಲಾಗಿದೆ.

ಬಾಗಲಕೋಟೆಯ ಹರಿಜನಕೇರಿಯಲ್ಲಿ ಪ್ರೌಢ ಶಿಕ್ಷಣ ವರ್ಗಗಳು ಡಾ. ಅಂಕಲಿಕರರ ಅಧ್ಯಕ್ಷತೆಯಲ್ಲಿ ಶ್ರೀ ಆರ್ ಬಿ ಪಾಟೀಲ ಅವರಿಂದ ನೆರವೇರಿತು. ವಾಚನಾಲಯದ ಸಲುವಾಗಿ ೩೦೧ ರೂ ನಿಧಿ ಕೊಡಲಾಯಿತು.

## ಬಳ್ಳಾರಿ

ಬಳ್ಳಾರಿ ಜಿಲ್ಲಾ ೨ ನೇ ಅಖಿಲ ಕರ್ನಾಟಕ ಏಕೀಕರಣ ಪರಿಷತ್ತಿಗೆ ಶ್ರೀ ಬಿ. ಅನಂತಾಚಾರ್ಯರು ಅಧ್ಯಕ್ಷರಾಗಲು ಒಪ್ಪಿದ್ದಾರೆ. ಪರಿಷತ್ತಿನ ಅಂಗವಾಗಿ ನಡೆವ ಅಖಂಡ ಬಳ್ಳಾರಿ ಜಿಲ್ಲೆಯ ಪ್ರಮುಖ ಕಾರ್ಯಕರ್ತರ ಸಭೆಗೆ ಶ್ರೀ ಕೆ. ಬೊಕ್ಕೇಗೌಡರು ಉಪಕ ಮಂಡಲ ಅವರಿಗೆ ಅಧ್ಯಕ್ಷನಾಗಲು ಕೇಳಿಕೊಳ್ಳಲಾಗಿದೆ.

ಕಮ್ಮತ್ತಹಳ್ಳಿಯಲ್ಲಿ ೧೫ ನೇ ತಾರೀಖು ಸ್ವಾತಂತ್ರ್ಯೋತ್ಸವ ಒಳ್ಳೆ ವಿಜೃಂಭಣೆಯಿಂದ ಆಚರಿಸಲಾಯಿತು. ಮಧ್ಯಾಹ್ನ ೩ ಗಂಟೆಯಿಂದ ಶಾಲಾ ಮೈದಾನದಲ್ಲಿ ಬಹಿರಂಗ ಸಭೆ ನಡೆಯಿತು ಶ್ರೀ ಪಂಪನಗೌಡರು ಅಧ್ಯಕ್ಷರಾಗಿದ್ದರು. ಹಲವರ ಭಾಷಣಗಳಾಗಿ ಪ್ರಾರ್ಥನೆಯೊಂದಿಗೆ ಸಭಾಕಾರ್ಯ ಕೊನೆಗಂಡಿತು. ಮಕ್ಕಳಿಗೆ ಉಪಹಾರ ಕೊಡಲಾಯಿತು.

---

ಜಮಖಂಡಿಯ ಅಧಿಪತಿಗಳಾಗಿದ್ದ ಶ್ರೀಮಂತ ಶಂಕರರಾವ ಪಟವರ್ಧನರು ಹೃದಯಕ್ರಿಯೆ ನಿಂತು ಮುಂಬಯಿಯಲ್ಲಿ ೨೩ಕ್ಕೆ ನಿಧನ ಹೊಂದಿದರು.




ಗಡಿ ನಿರ್ಣಯ ಸಮಿತಿಯ ತೀರ್ಪಿನಂತೆ ಪಂಜಾಬ ವಿಭಜನೆ ಆದ ನಂತರ ಪೂರ್ವ ಹಾಗೂ ಪಶ್ಚಿಮ ಪಂಜಾಬ ಪ್ರಾಂತಗಳ ನಕಾಶೆ.




ಗಡಿ ನಿರ್ಣಯ ಸಮಿತಿಯ ತೀರ್ಪಿನಂತೆ ಬಂಗಾಲ ಪ್ರಾಂತದಲ್ಲಿ ಪೂರ್ವ ಬಂಗಾಲ ಪಶ್ಚಿಮ ಬಂಗಾಲ ಹೀಗೆ ಎರಡು ಪ್ರಾಂತಗಳಾದ ನಕಾಶೆ.

## ಉತ್ತರ ಕನ್ನಡ

ಕುಮಟಾ ತಾಲೂಕಿನಲ್ಲಿ ವಿಪರೀತ ಮಳೆ ಬಿದ್ದಿದೆ. ಇದರಿಂದ ಅಘನಾಶಿನಿ ನದಿಯ ನೀರು ಉಕ್ಕೇರಿ ಬಂದು ಮಿರ್ಜಾನಪುರಿಯಲ್ಲಿ ಕಟ್ಟಿಟ್ಟ ಒಂದು ಜಂಗಲು ಹರಿದು ಹೋಗಿತ್ತು. ಅದರೆ ಗಿಡಗಂಟಿಗಳ ಕಡೆಗೆ ಅದು ಸಿಕ್ಕಿತ್ತಿಲ್ಲವಾದರೆ ಸಮುದ್ರದ ಪಾಲಾಗುತಿತ್ತು.

ಕಾರವಾರ ಜಂಗಲ ಕೂಪಗಳ ಬಗ್ಗೆ ಟೆಂಡರ ಕೇಳಲಾಗಿತ್ತು. ಪಶ್ಚಿಮ ಭಾಗದ ಕೂಪಗಳಿಗೆ ಹಿಂದೆ ಸರಾಸರಿ ೧ ಲಕ್ಷ ರೂಪಾಯಿಗಳ ಸವಾಲುಗಳು ಬರುತಿದ್ದವು. ಈ ವರ್ಷ ಇಮ್ಮಡಿ ಸವಾಲುಗಳು ಬಂದಿವೆಯಂತೆ ಹಿಂದೆ ಕೂಪಗಳನ್ನು ಮಾಡುತಿದ್ದ ಎಷ್ಟೋ ಮಂದಿಗೆ ಈ ವರ್ಷ ಕೂಪಗಳು ಸಿಕ್ಕಿಲ್ಲವಂತೆ.

## ಕನ್ನಡ ಸಂಸ್ಥಾನ

ಚೌಡಾಳ ಗ್ರಾಮದವರು ಸ್ವಾತಂತ್ರ್ಯೋತ್ಸವವನ್ನು ವಿಜೃಂಭಣೆಯಿಂದ ಜರುಗಿಸಿದರು. ಹೆಬ್ಬಾಳದಲ್ಲಿ ಹಾಲಪ್ಪನವರು ಜನರಿಂದೊಡಗೂಡಿ ಧ್ವಜವನ್ನು ಹಾರಿಸಿದ್ದಲ್ಲದೆ ಭಾಷಣ ಮಾಡಿ ಸ್ವಾತಂತ್ರ್ಯದ ತಿರುಳನ್ನು ಜನರಿಗೆ ತಿಳಿಸಿದರು.

ಮುಧೋಳ ಸಂಸ್ಥಾನದ ಮಿರ್ಜಿಯಲ್ಲಿ ಸ್ವಾತಂತ್ರ್ಯೋತ್ಸವ ವಿಜೃಂಭಣೆಯಿಂದ ನಡೆಯಿತು. ಮುಂಜಾನೆ ಊರ ಪ್ರಮುಖರು ನಗರ ಸಂಕೀರ್ತನ ಹೊರಡಿಸಿದ್ದರು. ಮುಂಜಾನೆ ೮ ಗಂಟೆಗೆ ರಾಷ್ಟ್ರಧ್ವಜ ಏರಿಸಲಾಯಿತು. ಸ್ವಾತಂತ್ರ್ಯೋತ್ಸವದ ಪ್ರತಿಜ್ಞೆಯನ್ನು ಓದಲಾಯಿತು.

ಮಲ್ಲಾಪುರ ಗ್ರಾಮದ ಚಾವಡಿಯ ಮೇಲೆಯೂ ಧ್ವಜವನ್ನೇರಿಸಲಾಯಿತು. ಸಾಯಂಕಾಲ ಮಿರ್ಜಿಯಲ್ಲಿ ಮೆರವಣಿಗೆ ತೆಗೆಯಲಾಗಿತ್ತು. ಸಾಯಂಕಾಲ ೬ ಗಂಟೆಯಿಂದ ದೀಪೋತ್ಸವ ನಡೆಯಿತು. ಮರುದಿನ ಅನ್ನಸಂತರ್ಪಣೆ ನಡೆಯಿತು. ಸಾಯಂಕಾಲ ಸಾರ್ವಜನಿಕ ಸಭೆ ಸೇರಿ ಭಾಷಣಗಳಾದವು. ವಂದೇಮಾತರಂ ಪದದೊಂದಿಗೆ ಉತ್ಸವ ಕೊನೆಗಂಡಿತು.

ಕೆಲವರನ್ನು ಬಿಟ್ಟು ಉಳಿದ ಎಲ್ಲ ದಕ್ಷಿಣ ಸಂಸ್ಥಾನಾಧಿಪತಿಗಳು ರಾಷ್ಟ್ರಧ್ವಜಕ್ಕೆ ತಕ್ಕ ಗೌರವ ವ್ಯಕ್ತಪಡಿಸಲಿಲ್ಲೆಂದು ಹೇಳಲು ಅತ್ಯಂತ ವಿಷಾದವಾಗುತ್ತದೆಂದು ಅ. ಭಾ. ಸಂ. ಪ್ರ. ಪರಿಷತ್ತಿನ ಸ್ಥಾಯೀ ಸಮಿತಿಯ ಸದಸ್ಯರಾದ ಬಿ. ವಿ. ಶಿಖರೆಯವರು ಪ್ರಕಟಿಸಿದ್ದಾರೆ. ಹಿಂದುಸ್ತಾನಕ್ಕೆ ಸ್ವಾತಂತ್ರ್ಯ ಸಿಕ್ಕಿದೆಯಾದ್ದರಿಂದ ತಮಗೂ ಸ್ವಾತಂತ್ರ್ಯ ಸಿಕ್ಕಂತೆ ಆಗಿದೆಂದು ಕೆಲವು ಸಂಸ್ಥಾನಿಕರು ಭಾವಿಸಿರುವರು. ರಾಷ್ಟ್ರಧ್ವಜಕ್ಕೆ ತಕ್ಕ ಗೌರವವನ್ನು ಸಂಸ್ಥಾನಾಧಿಪತಿಗಳು ತೋರಿಸಬೇಕಾದರೆ ಪ್ರಜೆಗಳಲ್ಲಿ ಶಕ್ತಿಸಂಘಟನೆ ಹೆಚ್ಚಬೇಕೆಂದೂ ಅವರು ಅಭಿಪ್ರಾಯಪಟ್ಟಿದ್ದಾರೆ.

ಸೊಂಡೂರಲ್ಲಿ ೧೫ ನೇ ಮುಂಜಾನೆ ಪ್ರಭಾತಫೇರಿಯಾಗಿ ಧ್ವಜವಂದನೆಯಾಯಿತು. ತರುವಾಯ ಮೆರವಣಿಗೆಯಾಗಿ ಕ್ಷೀರಾನ್ನ ಸಂತರ್ಪಣೆಯಾಯಿತು. ಮಧ್ಯಾಹ್ನ ಮುಖಂಡರ ಭಾವಚಿತ್ರಗಳ ಮೆರವಣಿಗೆಯಾಗಿ ಶ್ರೀಕೃಷ್ಣರಾಯರ ಅಧ್ಯಕ್ಷತೆಯಲ್ಲಿ ಸಭೆಯಾಯಿತು.




## ಹೊಸದಿಲ್ಲಿ

ತಾ. ೨೫ ರಲ್ಲಿ ಹೊಸದಿಲ್ಲಿಯಿಂದ ಶ್ರೀ ಅರುಣಾ ಅಸಫ ಅಲ್ಲಿಯವರು ಇಂಗ್ಲಂಡಿಗೆ ಪ್ರಯಾಣ ಬೆಳೆಸಿದರು. ಅಲ್ಲಿ ಅವರು ಭಾರತಕ್ಕೆ ಮರಳುತ್ತಿದ್ದ ಅಮೇರಿಕದಲ್ಲಿಯ ಹಿಂದೀ ರಾಯಭಾರಿಗಳಾದ ಶ್ರೀ ಅಸಫ ಅಲ್ಲಿಯವರಿಗೆ ಭೆಟ್ಟಿಯಾಗಲಿರುವರು. ಶ್ರೀ ಅಸಫ ಅಲ್ಲಿಯವರು ವಿಚಾರವಿನಿಮಯಕ್ಕೆಂದು ಭಾರತಕ್ಕೆ ಅಗಸ್ಟ ೩೦ ಕ್ಕೆ ಬರಲಿರುವರೆಂದೂ ಇಂದು ೩ ವಾರ ಇರುವರೆಂದೂ ತಿಳಿಯುತ್ತದೆ.

ಶಾಲೆ ಕಾಲೇಜುಗಳ ಪಠ್ಯಪುಸ್ತಕಗಳನ್ನು ಮುದ್ರಿಸಲು ಈಗ ಕಾಗದದ ಕೊರತೆಯಿರುವದರಿಂದ ಈ ಅಗಸ್ಟದಿಂದ ಡಿಸೆಂಬರ ವರೆಗೆ ಅಚ್ಚಿಗೆ ಬೇಕಾದ ಕಾಗದಗಳನ್ನು ಸ್ವಲ್ಪ ಪ್ರಮಾಣದಲ್ಲಿ ಈ ಬಗ್ಗೆ ಪ್ರಕಾಶಕ ಹಾಗೂ ಮುದ್ರಕರಿಗೆ ಒದಗಿಸಿಕೊಡಬೇಕೆಂದು ಭಾರತ ಸರಕಾರ ನಿರ್ಧರಿಸಿದೆ. ಸದ್ಯಕ್ಕೆ ಬೇಕಾದವರು ಸಿಮಲಾದಲ್ಲಿರುವ ಸಂಬಂಧಪಟ್ಟ ಅಧಿಕಾರಿಗಳಿಗೆ ಕಾಯಿದೆಯಂತೆ ಅರ್ಜಿ ಮಾಡಿಕೊಳ್ಳಬೇಕೆಂದು ಪ್ರಕಟನೆ ಹೊರಟಿದೆ.

ಸಂಯುಕ್ತ ಸಂರಕ್ಷಣ ಮಂಡಲವು ತಾ. ೨೫ ರಲ್ಲಿ ಲಾರ್ಡ ಮೌಂಟ ಬ್ಯಾಟನ್ನರ ಅಧ್ಯಕ್ಷತೆಯಲ್ಲಿ ಸಭೆ ಸೇರಿ ಪಂಜಾಬಿನ ಪರಿಸ್ಥಿತಿಯನ್ನು ಚರ್ಚಿಸಿತು.

ಕರ್ನಾಟಕದ ಮುಖಂಡರಾದ ಶ್ರೀಗಳಾದ ಎಸ್. ನಿಜಲಿಂಗಪ್ಪ, ಮಲ್ಯ, ಮುನವಳ್ಳಿ, ದಿವಾಕರ ಮತ್ತು ಕೃಷ್ಣಮೂರ್ತಿರಾವ್ ಮೊದಲಾದವರು ಸರದಾರ ಪಟೇಲರನ್ನು ಕಂಡು ಕರ್ನಾಟಕ ಏಕೀಕರಣದ ವಿಷಯವಾಗಿ ಅವರೊಡನೆ ಚರ್ಚಿಸಿದರು. ಇವರು ಕೇಂದ್ರ ಸರಕಾರದ ಇತರ ಮಂತ್ರಿಗಳನ್ನೂ ಬೇರೆ ವರಿಷ್ಠ ಮುಖಂಡರನ್ನೂ ಕಂಡು ಈ ವಿಷಯವನ್ನು ಚರ್ಚಿಸಲಿರುವರು.

ಕಲಕತ್ತೆಯಲ್ಲಿ ಮಹಾತ್ಮರು ಹಿಂದು ಮುಸ್ಲಿಂ ಸೌಹಾರ್ದ ಸ್ಥಾಪಿಸಿದ್ದಕ್ಕಾಗಿ ಅವರಿಗೆ ಕೃತಜ್ಞತೆ ಅರ್ಪಿಸಬೇಕೆಂದು ಹಿಂದುಸ್ತಾನ ಘಟನಾ ಸಮಿತಿಯ ಲೀಗ ಸದಸ್ಯರು ಠರಾವು ಪಾಸು ಮಾಡಿದರು.

ದಿಲ್ಲಿ ಪ್ರಾಂತಿಕ ಸರಕಾರವು ೧ ಲಕ್ಷ ನಿರಾಶ್ರಿತರಿಗಾಗಿ ಶಿಬಿರ ತೆರೆಯಲಿದ್ದಾರೆ.

ಸ್ವಾತಂತ್ರ್ಯೋತ್ಸವದ ನಿಮಿತ್ತ ದಿಲ್ಲಿಯ ಸೆರೆಮನೆಯಿಂದ ೧೭೨ ಕೈದಿಗಳನ್ನು ಮುಕ್ತಮಾಡಿದ್ದು ಅವರಲ್ಲಿ ೮೫ ಜನ ಸಾಧುಗಳಿದ್ದರು. ರಾಷ್ಟ್ರ ವಿಚ್ಛೇದವನ್ನು ವಿರೋಧಿಸಲು ಮತ್ತು ಗೋವಧೆಯನ್ನು ನಿಲ್ಲಿಸಲು ಈ ಸಾಧುಗಳು ಸತ್ಯಾಗ್ರಹ ಮಾಡಿ ಜೇಲಿಗೆ ಹೋಗಿದ್ದರು.

## ಮುಂಬಯಿ

ಅಮೇರಿಕವು ಯಾವಾಗಲೂ ಭಾರತದೊಡನೆ ಮೈತ್ರಿಯಿಂದಿರುವದೆಂದು ಅಮೇರಿಕದ ರಾಯಭಾರಿಗಳಾದ ಡಾ. ಹೆನ್ರಿ ಗ್ರೇಡಿಯವರು ತಾ. ೨೬ ರಲ್ಲಿ ಮುಂಬಯಿಯ ರೋಟರಿ ಕ್ಲಬ್ಬಿನಲ್ಲಿ ಭಾಷಣ ಮಾಡುತ್ತ ಹೇಳಿದರು.

ಕೊಯಿಮುತ್ತೂರಿನ ಓರ್ವ ಡಾಕ್ಟರರ ಹಾಗೂ ಎಲುವು ಕೂಡಿಸುವವರ ಸಲಹೆ ಪಡೆಯಲು ಶ್ರೀ ವಿಜಯ ಮರ್ಚಂಟರು ಅಲ್ಲಿಗೆ ವಿಮಾನ ಮಾರ್ಗವಾಗಿ ಹೋಗಿದ್ದಾರೆ. ಕೊಯಿಮುತ್ತೂರು ಡಾಕ್ಟರರ ಅಭಿಪ್ರಾಯವನ್ನು ಪ್ರತಿಯ ಕ್ರಿಕೆಟ್ ಆಟಗಾರರು ಅತ್ಯಂತ ಉತ್ಸುಕತೆಯಿಂದ ನಿರೀಕ್ಷಿಸುತ್ತಿದ್ದಾರೆ.

ಮುಂಬಯಿ ಪ್ರಾಂತದ ಪೋಲೀಸರಿಗೆ ಕೊಟ್ಟ ಸಂದೇಶದಲ್ಲಿ ಹೊಸ ಪೋಲೀಸ ಇನ್ಸ್ಪೆಕ್ಟರ್ ಜನರಲ್ಲರಾದ ಶ್ರೀ ಕಾಮ್ಟೆಯವರು ಪೋಲೀಸರು ಹಿಂದೀಯರು ಚೆನ್ನಾಗಿ ಆಡಳಿತ ನಡೆಸಬಲ್ಲರೆಂಬುದನ್ನು ಸಿದ್ಧಪಡಿಸಬೇಕು ಮತ್ತು ಅವರು ಸದಾಚಾರದ ಹಾಗೂ ಉತ್ತಮ ಆಡಳಿತದ ಪುರಸ್ಕರ್ತರಾಗಬೇಕೆಂದು ಹೇಳಿದ್ದಾರೆ. ಇದರ ಇದಿನ್ಯೂ ಮೂ ಪ್ರಾಂತದ ರೇಲ್ವೆ ಸ್ಟೇಶನ್ನುಗಳಲ್ಲಿ ಪ್ರವಾಸಿಕರಿಗೆ ಸಹಾಯ ಒದಗಿಸಿಕೊಡಲು ಪ್ರಾಂತದ ಹೊಸ ಪೋಲೀಸ ಇನ್ಸ್ಪೆಕ್ಟರ ಜನರಲ್ಲರಾದ ಶ್ರೀ ಕಾಮ್ಟೆಯವರು ಒಂದು ಹೊಸ ಯೋಜನೆಯನ್ನು ಸಿದ್ಧಪಡಿಸಿದ್ದಾರೆ. ಸಾರ್ವಜನಿಕರಿಗೆ ಹೆಚ್ಚು ಸೇವೆ ಸಲ್ಲಿಸುವ ಸಾಯೋಗವು ಈ ಯೋಜನೆಯಿಂದ ಪೋಲೀಸರಿಗೆ ಉಂಟಾಗುವುದು.

## ಪಶ್ಚಿಮ ಬಂಗಾಲ

ಫಾರ್ವರ್ಡಬ್ಲಾಕ್ ಅನ್ನು ಮುಂದೆ ಸ್ವತಂತ್ರ ರಾಜಕೀಯ ಪಕ್ಷವಾಗಿ ಕೆಲಸ ಮಾಡಬೇಕೆಂದೂ ಅದರ ಸದಸ್ಯರು ಕಾಂಗ್ರೆಸ್ಸಿನ ಸದಸ್ಯರಾಗಬಾರದೆಂದೂ ಫಾರ್ವರ್ಡಬ್ಲಾಕಿನ ಕಾರ್ಯಸಮಿತಿಯು ತೀರ್ಮಾನಿಸಿದೆ.

ಶ್ರೀ ವಿಜಯಮರ್ಚಂಟರಿಗೆ ಆಸ್ಟ್ರೇಲಿಯಕ್ಕೆ ಹೋಗಲು ಶಕ್ಯವಾಗಬಹುದೆಂದು ನನ್ನ ಆಶೆಯಿದೆ, ಮುಸ್ತಾಕ ಅಲ್ಲಿಯವರಿಗೆ ಅವಕಾಶ ದೊರೆಕೊಡಿಸಲು ಬೋರ್ಡಿನವರು ಇಂದೂರು ಸರಕಾರಕ್ಕೆ ವಿನಂತಿಸಿಕೊಂಡಿದ್ದಾರೆ—ಎಂದು ಹಿಂದೀ ಕ್ರಿಕೆಟ್ ಕಂಟ್ರೋಲ್ ಬೋರ್ಡಿನ ಕಾರ್ಯದರ್ಶಿಗಳಾದ ಶ್ರೀ ಗುಪ್ತರು ಕಲಕತ್ತದಲ್ಲಿಯ ಸಂದರ್ಶನವೊಂದರಲ್ಲಿ ಹೇಳಿದರು.

ಹಿಂದು-ಮುಸಲ್ಮಾನ ಮೈತ್ರಿಯನ್ನು ಹೆಚ್ಚಿಸಲು ತಾ. ೨೬ ರಲ್ಲಿ ಮೇಜರ ಜನರಲ್ ಶಹನವಾಜರ ನೇತೃತ್ವದಲ್ಲಿ ಹಾಗೂ ಕೇಂದ್ರ ಶಾಂತಿ ಸಮಿತಿಯ ಆಶ್ರಯದಲ್ಲಿ ೨ ಮೈಲುದ್ದದ ಹಿಂದು ಮುಸಲ್ಮಾನರ ಮೆರವಣಿಗೆಯು ಇತ್ತೀಚೆಗೆ ಗಲಭೆಗಳ ನೆಲೆವೀಡಾಗಿದ್ದ ಕಲಕತ್ತದ ಬೀದಿಗಳಲ್ಲಿ ಹಾಯ್ದು ಹೋಯಿತು.

ಪಶ್ಚಿಮ ಬಂಗಾಲದ ಮುಖ್ಯ ಮಂತ್ರಿ ಡಾ. ಪ್ರಫುಲ್ಲಚಂದ್ರ ಘೋಷ ಹಾಗೂ ಶ್ರೀ ಕಿರಣಶಂಕರ ರಾಯರು ಪ್ರತ್ಯೇಕವಾಗಿ ತಾ. ೨೬ ರಲ್ಲಿ ಮಹಾತ್ಮಾ ಗಾಂಧಿಯವರನ್ನು ಸಂದರ್ಶಿಸಿ ಮಹತ್ವದ ವಿಷಯಗಳನ್ನು ಚರ್ಚಿಸಿದರೆಂದು ತಿಳಿದುಬಂದಿದೆ.

ಪಶ್ಚಿಮ ಬಂಗಾಲದ ಮುಖ್ಯ ಮಂತ್ರಿಗಳು ಕಾಂಗ್ರೆಸ್ ವರಿಷ್ಠರೊಡನೆ ಮಾತಾಡಿ ದಿಲ್ಲಿಯಿಂದ ಹಿಂದಿರುಗಿ ಬಂದಾಗಿನಿಂದ ಪಶ್ಚಿಮ ಬಂಗಾಲದ ಮಂತ್ರಿಮಂಡಲದಲ್ಲಿ ಬದಲಾವಣೆಯಾಗಬಹುದೆಂದು ಊಹೆಯಿದೆ.

ಆಝಾದ ಸೈನ್ಯದ ಶ್ರೀ ಶಹನವಾಜರವರು ತಾ. ೨೫ ರ ಮಧ್ಯಾಹ್ನ ಮಹಾತ್ಮರನ್ನು ಕಲಕತ್ತದಲ್ಲಿ ಕಂಡು ಬಿಹಾರ ನಿರಾಶ್ರಿತರ ಪುನರ್ನಿವೇಶನದ ಬಗ್ಗೆ ಚರ್ಚಿಸಿದರು. ಶ್ರೀ ಶಹನವಾಜರ ಕಡೆಗೆ ಬಿಹಾರ ನಿರಾಶ್ರಿತರ ಪುನರ್ನಿವೇಶನ ಕಾರ್ಯವು ಒಪ್ಪಿಸಲ್ಪಟ್ಟಿದೆ.

ಇಂಡೋನೇಶಿಯದಲ್ಲಿ ಗಾಯಗೊಂಡವರಿಗೆ ಸಹಾಯ ಮಾಡುವುದಕ್ಕಾಗಿ ಇಂಡಿಯನ್ ರೆಡ್ ಕ್ರಾಸ್ ಸಂಸ್ಥೆಯಿಂದ ಔಷಧ ಸಾಮುಗ್ರಿ ತೆಗೆದುಕೊಂಡು ವಿಮಾನವೊಂದು ತಾ. ೨೩ ರಂದು ಕಲಕತ್ತೆಯಿಂದ ಹೊರಬಿದ್ದಿತು. ಮತ್ತೊಂದು ವಿಮಾನ ಹೋಗಲಿದೆಯೆಂದೂ ಒಟ್ಟು ೭ ಸಾವಿರ ಪೌಂಡುಗಳ ಬೆಲೆಯ ಔಷಧ ಪುರವಠೆಮಾಡಲಾಗುವುದೆಂದೂ ತಿಳಿಯುತ್ತದೆ.

ತಾ. ೨೨ ರಿಂದ ಮುಷ್ಕರಹೂಡಿದ್ದ ಕಲಕತ್ತದ ಪೋರ್ಟ ಟ್ರಸ್ಟ ಕಚೇರಿಯ ೧೫ ಸಾವಿರ ಕೆಲಸಗಾರರು ತಾ. ೨೩ ರಿಂದ ಕೆಲಸಕ್ಕೆ ಹಾಜರಾದರು. ಓರ್ವ ಯುರೋಪ್ಯ ಅಧಿಕಾರಿ ಒಬ್ಬ ಕೆಲಸಗಾರನನ್ನು ಹೊಡೆದುದರಿಂದ ಈ ಮುಷ್ಕರ ಪ್ರಾರಂಭವಾಗಿತ್ತು. ಮುಖ್ಯ ಮಂತ್ರಿ ಡಾ. ಘೋಷರ ಮಧ್ಯಸ್ಥಿಕೆಯಿಂದ ಮುಷ್ಕರ ಬಗೆಹರಿಯಿತು.

## ಪೂರ್ವ ಪಂಜಾಬ

ಪಾಕಿಸ್ತಾನದ ಆಕಾಶವಾಣಿಯು ೨೪ ನೆಯ ದಿನಾಂಕದ ಸಂಜೆಗೆ ಪ್ರಕಟಿಸಿದ ಸುದ್ದಿಯ ಕಡೆಗೆ ಪೂರ್ವ ಪಂಜಾಬ ಸರಕಾರದ ಲಕ್ಷ್ಯವನ್ನೆಳೆಯಲಾಗಿದೆ. ಈ ಸುದ್ದಿಯಲ್ಲಿ ಪೂರ್ವ ಪಂಜಾಬದಲ್ಲಿ ಅಲ್ಲಲ್ಲೊಂದು ನಡೆದ ಇರಿತಗಳನ್ನು ಮುಸಲ್ಮಾನರ ಸಾಮುದಾಯಿಕ ಸಂಹಾರವೆಂದು ತರ್ಕಿಸಲಾಗಿದೆ. ಈ ಕಲ್ಪನೆ ತಪ್ಪು. ಅಲ್ಪಸಂಖ್ಯಾಕರ ರಕ್ಷಣೆಗೆ ಅಗತ್ಯವಿರುವ ಎಲ್ಲ ಉಪಾಯವನ್ನೂ ಕೈಕೊಳ್ಳಲಾಗಿದೆಯೆಂದು ಪೂರ್ವ ಪಂಜಾಬ ಸರಕಾರ ಪ್ರಕಟಿಸಿದೆ.

ಪೂರ್ವ ಪಂಜಾಬಿನ ಹಳ್ಳಿಗಳ ಗಲಭೆಯ ಪರಿಸ್ಥಿತಿಯು ಸುಧಾರಿಸುತ್ತಿದೆ. ಅಮೃತಸರ ಹೋಶಿಯಾರಪುರ, ಜಲಂದರ, ಲೂಧಿಯಾನ, ಫಿರೋಜಪುರಗಳಲ್ಲಿ ಶಾಂತತೆಯಿದೆ. ಪಶ್ಚಿಮ ಪಂಜಾಬದಿಂದ ಬಂದ ಮುಸಲಮಾನೇತರ ನಿರಾಶ್ರಿತರು ಅಲ್ಲಿಯ ಪುಂಡಾಟಿಕೆಯನ್ನು ವರ್ಣಿಸುತ್ತಿರುವುದರಿಂದ ಜನರು ಸ್ವಲ್ಪ ರೊಚ್ಚಿಗೆದ್ದಂತಿದೆ.

## ಪಾಕಿಸ್ತಾನ

### ಪೂರ್ವ ಬಂಗಾಲ

ಸಿಲ್ಹಟ್ಟಿನ ಲಾಖಾಯಿ ಠಾಣೆಯಲ್ಲಿ ಪ್ರಾರಂಭವಾದ ಜಾತಿ ಗಲಭೆ ಈಗ ಹಿಡಿತದಲ್ಲಿರುವದೆಂದು ಡೆಪ್ಯುಟಿ ಕಮಿಶನರ ಖಾ. ಬ. ಸಯ್ಯದ ನಬಿ ಅಲಿಯವರಿಂದ ತಿಳಿದು ಬರುತ್ತದೆ. ಕಿಶೋರಗಂಜ್ ಮತ್ತು ಬ್ರಹ್ಮನಬಾರಿಯ ವಿಭಾಗಗಳಿಂದ ಹೊರಗಿನ ಜನ ಬಂದು ಗಲಭೆಗೆ ಪುಟ ಕೊಡದಂತೆ ವ್ಯವಸ್ಥೆ ಮಾಡಲು ಸ್ಕ್ವಾಡಗಳನ್ನು ಕಳುಹಲಾಗಿದೆಯೆಂದೂ ಹೆಚ್ಚು ಸೈನಿಕರನ್ನು ಕಳುಹಲಾಗುತ್ತಿದೆಯೆಂದೂ ಅವರು ಹೇಳಿದರು.

ಪೂರ್ವ ಬಂಗಾಲದ ಮುಖ್ಯ ಮಂತ್ರಿಗಳಾದ ಖ್ವಾಜಾ ನಾಜೀಮುದ್ದೀನರು ಪೂರ್ವ ಪಾಕಿಸ್ತಾನದ ಆಡಳಿತಕ್ಕೆ ಸಂಬಂಧಿಸಿದ ವಿಷಯಗಳ ಬಗ್ಗೆ ಕೇಂದ್ರ ಪಾಕಿಸ್ತಾನ ಸರಕಾರದೊಡನೆ ವಿಚಾರವಿನಿಮಯ ಮಾಡಲು ತಾ. ೨೫ ರಲ್ಲಿ ಕರಾಚಿಗೆ ವಿಮಾನದಲ್ಲಿ ತೆರಳಿದರು.

### ಸಿಂಧ

ಕ್ವೆಟ್ಟಾದಲ್ಲಿ ಗಲಭೆ ನಿಂತಿದೆಯೆಂದೂ ಪರಿಸ್ಥಿತಿ ಸಂಪೂರ್ಣ ಹಿಡಿತದಲ್ಲಿ ಬಂದಿದೆಯೆಂದೂ ಪಾಕಿಸ್ತಾನ ಸರಕಾರದ ಸಂಪರ್ಕ ಮಂತ್ರಿ ಸರದಾರ ನಿಸ್ತಾರರು ಒಂದು ಸಂದರ್ಶನದಲ್ಲಿ ಹೇಳಿದರು. ಅವರು ಕ್ವೆಟ್ಟಾದಿಂದ ಕರಾಚಿಗೆ ತಾ. ೨೫ ರಲ್ಲಿ ಹಿಂದಿರುಗಿದರು.

ಎಲ್ಲ ತರದ ಕೊರತೆಯನ್ನೂ ಅಂಜಿಕೆಯನ್ನೂ ನಿರ್ಮೂಲ ಮಾಡುವುದಷ್ಟೇ ಅಲ್ಲದೆ ಭದ್ರ ಸ್ವಾತಂತ್ರ್ಯ, ವಿಶ್ವಬಾಂಧವ್ಯ ಮತ್ತು ಸಮತೆಯನ್ನುಂಟು ಮಾಡಬೇಕೆಂದು ಇಸ್ಲಾಂ ಧರ್ಮವು ತಮಗೆ ಹೇಳಿದೆಯೆಂದು ಪಾಕಿಸ್ತಾನದ ಗವರ್ನರ ಜನರಲ್ಲರಾದ ಕಾ. ಅ. ಜಿನ್ನಾರು ಕರಾಚಿಯ ಪೌರ ಸಭೆಯ ಮಾನಪತ್ರಕ್ಕೆ ಉತ್ತರ ಕೊಡುತ್ತ ಸಾರಿದರು.

ಪಾಕಿಸ್ತಾನದ ಹೊಸ ಅಂಚೆ ತಿಕೀಟುಗಳ ಮೇಲೆ ಚಂದ್ರ ಚುಕ್ಕೆಗಳ ಗುರುತು ಇದ್ದು ಕೆಳಗೆ 'ಪಾಕಿಸ್ತಾನ' ಎಂದು ಮುದ್ರಿಸಲಾಗುವುದು. ಬೇರೆ ಬೇರೆ ಬೆಲೆಯ ತಿಕೀಟುಗಳನ್ನು ಬೇರೆ ಬೇರೆ ಬಣ್ಣದಲ್ಲಿ ಮುದ್ರಿಸಲಾಗುವುದು. ಆಕಾರ ಮಾತ್ರ ಈಗಿದ್ದಷ್ಟೆ. ಇವುಗಳ ಮೇಲೆ ಯಾರ ಮುಖ ಮುದ್ರೆಯೂ ಇರುವದಿಲ್ಲ. ಈ ಹೊಸ ತಿಕೀಟುಗಳು ೧೯೪೮ ರ ಪ್ರಾರಂಭದಿಂದ ಬಳಕೆಯಲ್ಲಿ ಬರುವುವು.

ಮುಂದಿನ ವರ್ಷ ಏಪ್ರಿಲ ತಿಂಗಳ ವರೆಗೆ ಪಾಕಿಸ್ತಾನವು ಭಾರತಕ್ಕಾಗಲಿ ಇತರ ಪ್ರದೇಶಗಳಿಗಾಗಲಿ ಆಹಾರ ಧಾನ್ಯವನ್ನು ಕಳುಹುವ ಸ್ಥಿತಿಯಲ್ಲಿಲ್ಲವೆಂದು ವಿಶ್ವಸನೀಯವಾಗಿ ತಿಳಿಯುತ್ತದೆ.

ಪೂರ್ವ—ಪಶ್ಚಿಮ ಪಂಜಾಬ, ಬಂಗಾಲಗಳಲ್ಲಿ ಸಮ್ಮಿಶ್ರ ಸರಕಾರ ತಲೆಯೆತ್ತಿದರೆ ಮಾತ್ರ ಸಿಂಧದಲ್ಲಿ ಅಂಥ ಸರಕಾರ ರಚಿಸಲಾಗುವುದೆಂದು ಮುಖ್ಯಮಂತ್ರಿ ಶ್ರೀ ಖುರ್ರೋರು ಹೇಳಿದರು.

ಪಾಕಿಸ್ತಾನ ಘಟನಾ ಸಮಿತಿಗೆ ಘಟನಾತಜ್ಞರನ್ನು ನಿಯಮಿಸಲಾಗುವುದಿಲ್ಲವೆಂದೂ ಘಟನಾ ಸಮಿತಿಯ ಅಧ್ಯಕ್ಷ ಹಾಗೂ ಪಾಕಿಸ್ತಾನ ಗವರ್ನರ ಜನರಲ್ಲರಾದ ಕಾ. ಅ. ಜಿನ್ನಾರು ಸ್ವತಃ ಘಟನಾ ತಜ್ಞರಿದ್ದು, ತಾವೇ ಘಟನೆಯನ್ನು ಬರೆಯುವ ಕಾರ್ಯದಲ್ಲಿ ಘಟನಾ ಸಮಿತಿಗೆ ಮಾರ್ಗದರ್ಶನ ಮಾಡುವರು.

ಸಿಂಧ ಸರಕಾರದ ಅಬಕಾರೀ ಖಾತೆಯ ಮಂತ್ರಿಗಳಾದ ಕಾಜಿ ಫಜಲಲ್ಲಾರು ತಾ. ೨೩ ರಲ್ಲಿ ಪತ್ರಿಕಾ ಪ್ರತಿನಿಧಿಗಿತ್ತ ಸಂದರ್ಶನದಲ್ಲಿ ಸಿಂಧ ಸರಕಾರವು ಪಾನ ನಿರೋಧ ಧೋರಣ ಸ್ವೀಕರಿಸಿದ್ದು ಮುಸಲ್ಮಾನರಿಗೆ ಕೊಟ್ಟ ಹೆಂಡ ಸೇಂದಿಗಳ ದೊಡ್ಡ ಮತ್ತು ಚಿಕ್ಕ ಲೈಸೆನ್ಸುಗಳನ್ನು ರದ್ದುಪಡಿಸಲಾಗುವುದೆಂದರು.

ಪಶ್ಚಿಮ ಬಂಗಾಲದ ಗವರ್ನರರಾದ ಶ್ರೀ ಸಿ. ರಾಜಗೋಪಾಲಾಚಾರಿಯವರು ಜಿನ್ನಾರಿಗೆ 'ಕಲಕತ್ತದ ಬೀದಿಗಳಲ್ಲಿ ನಾನು ಕಂಡ ಈದ ಉತ್ಸವವು ಹೃದಯಂಗಮವಾಗಿತ್ತು' ಎಂದು ಈದ ಶುಭ ಸಂದೇಶ ಕಳುಹಿದರು.

೧೫೦ ಐ. ಸಿ. ಎಸ್. ಅಧಿಕಾರಿಗಳು ಪಾಕಿಸ್ತಾನದಲ್ಲಿ ಕೆಲಸ ಮಾಡಲು ಒಪ್ಪಿರುವರೆಂದೂ ಅವರಲ್ಲಿ ೬೦ ಯುರೋಪ್ಯರು, ೮೭ ಮುಸಲಮಾನರು, ೩ ಪಾರಸಿಗಳಿರುವರೆಂದೂ ಒಬ್ಬನಾದರೂ ಹಿಂದುವಿಲ್ಲೆಂದೂ ತಿಳಿದು ಬಂದಿದೆ. ಇದರಂತೆ ಪಾಕಿಸ್ತಾನ ಸೆಕ್ರೆಟೇರಿಯಟ್ ನವಕರರಲ್ಲೂ ಅರ್ಧ ಮುಸಲಮಾನರು, ಅರ್ಧ ಯುರೋಪ್ಯರು ಇರಬಹುದೆಂದು ಗೊತ್ತಾಗುತ್ತದೆ.

ಪೂರ್ವ ಪಂಜಾಬ ಸೀಮಾಪ್ರದೇಶದ ಹಳ್ಳಿಗಳು ಸಂಕಟಕ್ಕೀಡಾಗಿವೆ-ಎಂದು ಸರಕಾರೀ ಪ್ರಕಟನೆ ಹೊರಟಿದೆ.

## ಹೈದರಾಬಾದ ಸತ್ಯಾಗ್ರಹ

### ಸ್ವಾತಂತ್ರ್ಯ ದಿನಾಚರಣೆಯಲ್ಲಿ ಅಧಿಕಾರಿಗಳ ದಬ್ಬಾಳಿಕೆ

ಧನವಾಡಾದಲ್ಲಿ ಬೆಳಿಗ್ಗೆ ಧ್ವಜವಂದನೆಯಾಗಿ ಎಲ್ಲರೂ ಪ್ರತಿಜ್ಞೆ ಮಾಡಿ ಹಿಂದೀ ಒಕ್ಕೂಟದಲ್ಲಿ ಸೇರುವವರೆಗೆ ಹೋರಾಡುವೆವೆಂದು ಸಾರಿದರು. ಸಾಯಂಕಾಲ ಸಭೆ ಸೇರಿ ಶ್ರೀಗಳಾದ ಚಾಲಯ್ಯ, ಗೋವಿಂದರಾವ ಮೊದಲಾದವರ ಭಾಷಣಗಳಾದವು. ಇಬ್ಬರನ್ನೂ ಪೋಲೀಸರು ೩ ಗಂಟೆವರೆಗೆ ಬಂದಿಯಲ್ಲಿಟ್ಟು ಹೊಡೆದರು.

ಖಾಸನ್ನಪಲ್ಲಿಯಲ್ಲಿ ಧ್ವಜವಂದನೆ, ಸಾರ್ವಜನಿಕ ಸಭೆ ನಡೆದವು.

ಯಲ್ಲಿಗುಂಡಾದಲ್ಲಿ ಧ್ವಜವಂದನೆಯಾಗಿ ಸಾರ್ವಜನಿಕ ಸಭೆಯಲ್ಲಿ ಶ್ರೀ ಬಾಲಪ್ಪ ಅವರ ಭಾಷಣವಾಯಿತು. ಪೋಲೀಸ ಅಮೀನ ಹಾಗು ಸಿಪಾಯಿಗಳು ಧ್ವಜತೆಗೆಯಲು ಮಾಡಿದ ಪ್ರಯತ್ನ ಸಫಲವಾಗಲಿಲ್ಲ. ಹೆಚ್ಚು ಸಂಖ್ಯೆಯಲ್ಲಿ ಜನರು ಆಗಮಿಸಿದ್ದರು. ಪ್ರತಿಜ್ಞೆ ತೆಗೆದುಕೊಳ್ಳಲಾಯಿತು. ನಂತರ ಅಮೀನರು ಬಂದು ಶ್ರೀ ಭಗವಂತ ರೆಡ್ಡಿಯವರಿಂದ ೧ ಸಾವಿರ ರೂಪಾಯಿಯ ಜಾಮೀನಿನ ಕಾಗದ ಬರಿಸಿಕೊಂಡರು. ಆದರೆ ಜನರ ವಿರೋಧ ನೋಡಿ ಅದನ್ನು ತಿರುಗಿ ಕೊಟ್ಟರು.

ಖಿಜವಾರದಲ್ಲಿ ಧ್ವಜವಂದನೆ ಸಭೆಗಳು ನಡೆದವು. ಪೋಲೀಸರು ಯಾರನ್ನೂ ಬಂಧಿಸಿಲ್ಲ.

ಗುನೆಮುಕಲಾ, ಯುಮುನಾಪಲ್ಲಿ, ಪಸಪೋಲ, ಸೋನಾರಖೇಡ, ಕುತ್ತಾಪಲ್ಲಿ, ಪಾತಾಪಲ್ಲಿ, ಮುಖದುಮಪುರ, ಜಟರ ಮೊದಲಾದ ಗ್ರಾಮಗಳಲ್ಲಿ ಧ್ವಜವಂದನೆ, ಸಾರ್ವಜನಿಕ ಸಭೆ ನೆರವೇರಿದವು. ಶ್ರೀಗಳಾದ ನರಸಿಂಹಲು, ಹನಮಂತ ರೆಡ್ಡಿ, ನಾರಾಯಣ ರೆಡ್ಡಿ, ಮೊದಲಾದವರು ಭಾಷಣ ಮಾಡಿದರು.

ಕೋಡಂಗಲ ತಾಲೂಕಿನ ದೋಮನಪಹಾಡ ಹಾಗು ಮದಲಬೀಡ ಇವುಗಳಲ್ಲಿ ಧ್ವಜವಂದನೆ, ಸಾರ್ವಜನಿಕ ಸಭೆ ನಡೆದವು. ಧ್ವಜ ಹಾರಿಸಿದ ಬಗ್ಗೆ ಶ್ರೀ ಅಯ್ಯಪ್ಪ ಹಾಗು ರಾಜನ್ನಾ ಇವರನ್ನು ಮೋಹರೀರ ಹಾಗು ಪೋಲೀಸ ಗೌಡರು ಹೊಡೆದು ಧ್ವಜ ಜಪ್ತಮಾಡಿದರು.

ಕಲಬುರ್ಗಿ ತಾಲೂಕಿನ ಜಾವಳಿ, ಭೂಸನೂರ, ತಡಕಲ, ಹೊದಲೂರ, ಅಣೂರ, ಕೆಸರಜಾವಳಿ, ಮಟಾಳ, ಹಿಪ್ಪರಗಿಗಳಲ್ಲಿ ಧ್ವಜವಂದನೆ ಮೆರವಣಿಗೆಗಳು ಉತ್ಸಾಹದಿಂದ ಸಾಂಗವಾದವು. ಹೊದಲೂರಲ್ಲಿ ಆರು ಎತ್ತುಗಳ ಬಂಡಿ ಮೇಲೆ ರಾಷ್ಟ್ರಧ್ವಜದ ಮೆರವಣಿಗೆ ಹೊರಡಿಸಲಾಗಿತ್ತು. ಮಟಾಳದಲ್ಲಿ ಧ್ವಜ ಹಾರಿಸಿದ ಬಗ್ಗೆ ಶ್ರೀ ಮೋನಪ್ಪ ಅವರನ್ನು ಬಂಧಿಸಿ ಹಿಂದುಗಡೆ ಬಿಟ್ಟರು. ಭೂಸನೂರಿನಲ್ಲಿ ಮೂವರನ್ನು ಬಂಧಿಸಲಾಗಿದೆ.

ಚಿಟಗುಪ್ಪಿಯಲ್ಲಿ ಶ್ರೀ ಗಾಜರೇ ಅವರು ರಾಷ್ಟ್ರಧ್ವಜ ಹಾರಿಸಿ ಸಾರ್ವಜನಿಕ ಸಭೆಯಲ್ಲಿ ಭಾಷಣ ಮಾಡಿದರು. ಸುಮಾರು ೪—೫ ನೂರು ಜನರು ಭಾಗವಹಿಸಿದ್ದರು. ಸಭೆ ಮುಗಿದನಂತರ ಶ್ರೀ ಗಾಜರೇ ಅವರನ್ನು ಅಮೀನಸಾಹೇಬರು ಕರೆಸಿಕೊಂಡು ಖಾಸ ಮೋಟಾರಿನಿಂದ ಹೈದರಾಬಾದಿಗೆ ಕಳಿಸಿದರು. ಹಿಂದಿನಿಂದ ಶ್ರೀ ವಿಠ್ಠಲರಾವ ಕುಂದಾಲ ಅವರನ್ನು ಕರೆಸಿ ಒತ್ತಾಯದಿಂದ ಧ್ವಜ ತೆಗೆಸಿದ್ದಲ್ಲದೆ ಊರಲ್ಲಿಯ ಎಲ್ಲ ಮನೆಗಳ ಮೇಲಿನ ಧ್ವಜ ಕಿತ್ತು ಹಾಕಿದರು.

ಬೀದರಿನಲ್ಲಿ ಮೊಹಕಮೀಮ ಸಾಹೇಬರು ಜಿಲ್ಹಾ ಕಾಂಗ್ರೆಸ ಕಾರ್ಯಾಲಯದ ಮೇಲಿನ ಧ್ವಜ ತೆಗೆದುಹಾಕಲು ಹುಕುಮು ಹೊರಡಿಸಿ ಅದನ್ನು ತೆಗೆಸಿರುವರು.

ಗಂಗಾವತಿಯಲ್ಲಿ ಹಿಂದೀ ಒಕ್ಕೂಟ ಸೇರಲು ದಿನವನ್ನು ಆಚರಿಸಿದ ಸಂಬಂಧದಲ್ಲಿ ಹೈದರಾಬಾದ ಕಾಂಗ್ರೆಸ ಕಮಿಟಿಯ ಸದಸ್ಯರಾದ ಶ್ರೀ ಕೇಶವರಾವ ವಕೀಲ ಮತ್ತು ಶ್ರೀ ರಾಘವೇಂದ್ರರಾವ ಗಂಗಾವತಿಯವರು ಬಂಧಿಸಲ್ಪಟ್ಟಿದ್ದರು. ಇವರ ವಿಚಾರಣೆಯು ಗಂಗಾವತಿ ಮ್ಯಾಜಿಸ್ಟ್ರೇಟ ಕೋರ್ಟಿನಲ್ಲಿ ನಿನ್ನೆ ನಡೆದು ಕ್ರಮವಾಗಿ ಒಬ್ಬರಿಗೆ ೫ ತಿಂಗಳ, ಮತ್ತೊಬ್ಬರಿಗೆ ೪ ತಿಂಗಳ ಕಠಿಣ ಶಿಕ್ಷೆಯು ವಿಧಿಸಲ್ಪಟ್ಟಿತು. ಇವರ ವಿಚಾರಣೆಯನ್ನು ಕೇಳಲು ಕುತೂಹಲದಿಂದ ಅನೇಕ ಜನರು ಗುಂಪುಕಟ್ಟಿಕೊಂಡು ಕೋರ್ಟಿನ ಆವಾರದಲ್ಲಿ ನೆರೆದಿದ್ದರು.

---

ಪ್ರಾಂತದಲ್ಲಿ ಶಾಂತಿಯನ್ನು ಸ್ಥಾಪಿಸಿ ದೇಶದ ಆಡಳಿತವನ್ನು ಸುಗಮವಾಗಿಸಲು ಸಹಾಯ ನೀಡಬೇಕೆಂದು ಪಂ. ಜವಾಹರರು ಪೂರ್ವ ಪಂಜಾಬಿಗೆ ೨ ನೆಯ ಸಲ ಭೆಟ್ಟಿಯಿತ್ತಾಗ ತಾ. ೨೪ ರಲ್ಲಿ ಹೇಳಿದರು. ಈ ಸಲ ಪಂ. ನೆಹರು ಅವರು ಅನೇಕ ಔಪಚಾರಿಕ ಸಭೆಗಳಲ್ಲಿ ವಿಚಾರವಿನಿಮಯ ನಡೆಸಿದರು.

# ನಾಲ್ಕು ಮಾತು — ರಂಗನಾಥ ದಿವಾಕರ

## ರಾಷ್ಟ್ರಧ್ವಜ ಹಾಗೂ ಕಾಂಗ್ರೆಸ ಧ್ವಜ

ಕಾಂಗ್ರೆಸ್ಸಿನ ತ್ರಿವರ್ಣ ಧ್ವಜವೆ ಸ್ವಲ್ಪ ಪರಿವರ್ತನೆ ಹೊಂದಿ ಹಿಂದುಸ್ತಾನ ರಾಜ್ಯದ ರಾಷ್ಟ್ರಧ್ವಜವಾಗಿ ಬಿಟ್ಟಿದೆ. ರಾಟಿಯ ಸ್ಥಾನದಲ್ಲಿ ಅಶೋಕನ ಧರ್ಮ ಚಕ್ರವು ಬಂದಿದೆ. ಹೀಗಾಗಿ ಅಶೋಕನ ಧರ್ಮಚಕ್ರಾಂಕಿತವಾದ ತ್ರಿವರ್ಣ ಧ್ವಜವು ೧೫-೮-೪೭ ರಿಂದ ಇಂಡಿಯಾ ಒಕ್ಕೂಟದ [ಇಂಡಿಯನ್ ಯೂನಿಯನ್] ರಾಜ್ಯ ಧ್ವಜವಾಗಿದೆ. (ಸ್ಟೇಟ ಫ್ಲ್ಯಾಗ್). ಆ ದಿನದ ಸ್ವಾತಂತ್ರ್ಯ ಸಮಾರಂಭದ ಸಮಯದಲ್ಲಿ ಕಾಂಗ್ರೆಸ್ ಸಂಸ್ಥೆ ಕೂಡ ಅದೇ ಧ್ವಜವನ್ನು ಉಪಯೋಗಿಸಬಹುದೆಂದು ಕಾಂಗ್ರೆಸ್ ಕಾರ್ಯಕಾರೀ ಮಂಡಲದವರು ಹಾಗೂ ಅಧ್ಯಕ್ಷ ಕೃಪಲಾನಿಯವರು ಹೇಳಿದರು. ಅದರಂತೆ ಅಲ್ಲಲ್ಲಿ ಕಾಂಗ್ರೆಸ್ ಕಮೀಟಿಗಳು ಚರಖಾಂಕಿತ ಹಾಗೂ ಚಕ್ರಾಂಕಿತ ಧ್ವಜಗಳನ್ನು ಉಪಯೋಗಿಸಿದರು. ಆದರೆ ಇನ್ನು ಹೆಚ್ಚು ವಿಚಾರಮಾಡಿ ಕಾಂಗ್ರೆಸ್ಸು ತನ್ನ ಧ್ವಜದ ವಿಷಯವನ್ನು ನಿರ್ಣಯಿಸಬೇಕಾಗುವದು. ಕಾಂಗ್ರೆಸ್ಸು ತನ್ನ ಭವಿತವ್ಯದ ವಿಚಾರ ಮಾಡುವಾಗ ಈ ಮಹತ್ವದ ಪ್ರಶ್ನೆಯನ್ನು ನಿರ್ಧರಿಸುವದು ಅವಶ್ಯ.

x x x

ಚಕ್ರಾಂಕಿತ ರಾಷ್ಟ್ರಧ್ವಜವು ಒಂದು ರಾಜ್ಯದ [ಸ್ಟೇಟ್] ಧ್ವಜವಾದುದರಿಂದ ಅದರ ಉಪಯೋಗವು ಹಲವು ರಾಷ್ಟ್ರೀಯ ಹಾಗೂ ಅಂತರ್ ರಾಷ್ಟ್ರೀಯ ನಿಯಮಗಳಿಗೆ ಒಳಗಾದುದು. ಉದಾಹರಣಾರ್ಥವಾಗಿ ನಾವು ಇನ್ನು ಅದನ್ನು ಪಾಕಿಸ್ತಾನದಲ್ಲಿಯಾಗಲಿ ಅಫಗಾಣಿಸ್ತಾನದಲ್ಲಿಯಾಗಲಿ ಇಂಗ್ಲಂಡದಲ್ಲಿಯಾಗಲಿ ಬೇಕಾದಲ್ಲಿ ಬೇಕಾದಾಗ ಹಾರಿಸಲಾರೆವು. ಅಲ್ಲಿದ್ದ ಈ ರಾಷ್ಟ್ರದ ಅಥವಾ ರಾಜ್ಯದ ರಾಯಭಾರಿಗಳು ಮಾತ್ರ ಹಲವೊಂದು ಅಂತರ್‌ರಾಷ್ಟ್ರೀಯ ನಿಯಮಾನುಸಾರವಾಗಿ ಅದನ್ನು ಉಪಯೋಗಿಸಬಲ್ಲರು. ಆದರೆ ಚರಖಾಂಕಿತ ಕಾಂಗ್ರೆಸ್ಸಿನ ಧ್ವಜಕ್ಕೆ ಆ ಅಂತರ್‌ರಾಷ್ಟ್ರೀಯ ನಿಯಮಗಳು ಅನ್ವಯಿಸಲಾರವು. ಅಶೋಕ ಚಕ್ರಾಂಕಿತ ರಾಷ್ಟ್ರಧ್ವಜಕ್ಕೆ ಯಾವದೊಂದು ದೇಶದಲ್ಲಿ ಅಂತರ್ ರಾಷ್ಟ್ರೀಯ ನಿಯಮಗಳ ವಿರುದ್ಧ ಏನಾದರೂ ಅಪಮಾನವಾದರೆ ಇಂಡಿಯಾ ಒಕ್ಕೂಟ ಹಾಗೂ ಆಯಾ ದೇಶ ಇವುಗಳ ತಿಕ್ಕಾಟಕ್ಕೆ ಕಾರಣವಾಗುವದು. ಕಾಂಗ್ರೆಸ್ಸಿನ ಚರಖಾಂಕಿತ ಧ್ವಜದ ಮಾತು ಹಾಗಿಲ್ಲ. ಯಾಕೆಂದರೆ ಅದೊಂದು ರಾಜಕೀಯ ಪಕ್ಷದ ಧ್ವಜವು ಮಾತ್ರ.

x x x

ಕಾಂಗ್ರೆಸ್ಸು ತನ್ನ ರಾಜಕೀಯ ಧ್ಯೇಯವನ್ನು ಬದಲಾಯಿಸಿ ಆರ್ಥಿಕ ಸಾಮಾಜಿಕ ಸಮಾನತೆಯನ್ನು ಪ್ರಸ್ಥಾಪಿಸುವ ತನ್ನ ಕಾರ್ಯವನ್ನು ಮಾಡಲನುವಾಗುವದು ಇನ್ನು ಕ್ರಮಪ್ರಾಪ್ತವು. ಆಗ ಈ ದೇಶದಲ್ಲಿ ಅದೊಂದು ಪಕ್ಷವಾಗಿ ಪರಿಣಮಿಸುವದು. ಅದು ತನ್ನ ಈಗಿದ್ದ ಧ್ವಜವನ್ನೆ ಇಟ್ಟುಕೊಂಡು ಕೆಲಸ ಮಾಡುವದು ಯೋಗ್ಯವು. ಫ್ಯಾಸಿಸ್ಟ ಅಥವಾ ಏಕತಂತ್ರ ರಾಜ್ಯಪದ್ಧತಿ ಇರುವಲ್ಲಿ ಅಥವಾ ರಶಿಯಾದಂತೆ ಒಂದೇ ಒಂದು ಪಕ್ಷವು ಅಸ್ತಿತ್ವದಲ್ಲಿದ್ದಲ್ಲಿ ಮಾತ್ರ ಆಯಾ ರಾಜಕೀಯ ಪಕ್ಷ ಹಾಗೂ ರಾಜ್ಯ [ಸ್ಟೇಟ] ಇವೆರಡರ ಧ್ವಜವೂ ಒಂದೇ ಇರಬಲ್ಲವು. ಇತರ ಕಡೆಗೆ ಅಂದರೆ ಪ್ರಜಾತಂತ್ರ ರಾಜ್ಯಪದ್ಧತಿ ಅಸ್ತಿತ್ವದಲ್ಲಿರುವಲ್ಲಿ ರಾಜ್ಯದ ಧ್ವಜ ಬೇರೆ ಹಾಗೂ ಆಯಾ ದೇಶದಲ್ಲಿಯ ಬೇರೆ ಬೇರೆ ಪಕ್ಷಗಳ ಧ್ವಜ ಬೇರೆ ಹೀಗೆ ಇರುವದೇ ವಾಸ್ತವವು. ಇಲ್ಲದಿದ್ದರೆ ಇಲ್ಲದ ಸಲ್ಲದ ತೊಡಕುಗಳು ಉಂಟಾಗುವವು.

## ಸರಕಾರೀ ನೌಕರಿಗಳಲ್ಲಿ

### ಜಾತೀಯತೆ

ಜಾತಿಗಳ ಜನಸಂಖ್ಯೆಯ ಪ್ರಮಾಣದಿಂದ ನೌಕರಿಗಳನ್ನು ಕೊಡುವ ಧೋರಣೆಯನ್ನು ಈಗ ಬದಲಾಯಿಸಲಾಗಿದೆ ಎಂದು ಕೇಂದ್ರ ಸರಕಾರದವರು ಸಾರಿದ್ದಾರೆ. ಆದರೆ ಕೇವಲ ಮೇಲಿನ ನೌಕರಿಗಳಲ್ಲಿ (ಪಬ್ಲಿಕ್ ಸರ್ವೀಸ್ ಕಮಿಶನ್ನಿನ ಮುಖಾಂತರ ನೇಮಿಸಲಾಗುವ ನೌಕರಿಗಳಲ್ಲಿ ಮಾತ್ರ ) ಮಾತ್ರ ಹಾಗೆ ಮಾಡಲಾಗಿದೆ, ಹೊರತು ಉಳಿದೆಡೆಗಳಲ್ಲಿ ಜನಸಂಖ್ಯೆಯ ಪ್ರಮಾಣದಿಂದ ನೌಕರಿ ಕೊಡುವ ತತ್ವವನ್ನು ಹಾಗೆಯೆ ಇಟ್ಟಿರುವರು. ಜಾತೀಯತೆಯ ದುಷ್ಟ ಪರಿಣಾಮಗಳು ಎಲ್ಲಿಯವರೆಗೆ ಹೋಗುವವೆಂಬುದರ ಪ್ರತ್ಯಕ್ಷ ವಿಷ ಫಲಗಳನ್ನು ನಾವು ಭೋಗಿಸುತಿರುವಾಗ ಸಹ ಮತ್ತೆ ಆ ಜಾತೀಯತೆಯ ತತ್ವವನ್ನು ಯಾವದೇ ಮಾತಿನಲ್ಲಿ ಪುನಃಪುನಃ ತರುವದು ನಮ್ಮ ಪ್ರಗತಿಗೆ ಸಹಾಯಕವಾಗಲಾರದು. 'ಚಂಚು ಪ್ರವೇಶೋ ಮುಸಲ ಪ್ರವೇಶಃ' ಎಂಬಂತೆ ಈ ಜಾತೀಯತೆಯ ಹಣೇಬರಹವಿದೆ. ಕೊನೆಯ ಪಕ್ಷದಲ್ಲಿ ಒಂದು ಕೆಲಸವನ್ನಾದರೂ ಮಾಡುವದು ಅತ್ಯವಶ್ಯವಿದೆ. ಅದೇನೆಂದರೆ ಇನ್ನು ಐದು ವರುಷಗಳ ವರೆಗೆ ಮಾತ್ರ ಈ ಸವಲತ್ತು ಇರುವದು ಎಂದು ಸಾರಿ ಅಷ್ಟರಲ್ಲಿ ವಿದ್ಯಾಪ್ರಸಾರದ ಪ್ರಮಾಣವನ್ನು ಅತ್ಯಂತವಾಗಿ ಹೆಚ್ಚಿಸಿಬಿಡಬೇಕು. ನಮ್ಮ ಹಿಂದೂ ಸಮಾಜದೊಳಗಿನ ಜಾತಿತತ್ವವೆ ನಮ್ಮನ್ನು ಅತ್ಯಂತ ದುರ್ಬಲರನ್ನಾಗಿ ಮಾಡಿಬಿಟ್ಟಿದೆ. ಅದರ ಎಚ್ಚರ ಅದರ ಧ್ಯಾನ, ಅದರ ಸತತ ನಿದಿಧ್ಯಾಸ ಇವುಗಳಿಂದಲೆ ಪ್ರಚಂಡವಾದ ಹಿಂದೂ ಸಮಾಜವು ಈ ಹೊತ್ತು ಶತಶಃ ತುಂಡಾಗಿದೆ. ಸಾಮಾಜಿಕ ಉಚ್ಚ ನೀಚ ಭಾವ ತೋರಿಸುವುದೊಂದು ಅಪರಾಧವೆಂದೂ ಅದನ್ನು ದಂಡಿಸುವದು ಕೂಡ ಅವಶ್ಯವೆಂದೂ ಹೇಳಿದರೆ ತಪ್ಪಾಗದು.

## ಗವ್ಹರ್ನರರ ಸಂಬಳ

ಗವ್ಹರ್ನರರಿಗೆ ಆರು ಸಾವಿರ ಸಂಬಳ ಎಂದೊಡನೆ ನಮ್ಮಲ್ಲಿ ಅನೇಕರಿಗೆ ಪೆಟ್ಟು ಕೊಟ್ಟಂತಾಯಿತು. ಅದು ಸ್ವಾಭಾವಿಕ. ಕಾಂಗ್ರೆಸ್ಸಿನ ರಾಜ್ಯವೆಂದರೆ ಹೇಗಿರಬೇಕು ಎಂಬ ಬಗ್ಗೆ ಕಾಂಗ್ರೆಸ್ಸಿನವರೇ ಈ ವರೆಗೆ ಜನರ ಕಣ್ಣು ಮುಂದೆ ಒಂದು ಚಿತ್ರವನ್ನು ರೇಖಿಸಿರುವರು. ಜನರು ಆ ಚಿತ್ರವನ್ನು ಕಣ್ಣು ಮುಂದಿಟ್ಟುಕೊಂಡು ಕಾಂಗ್ರೆಸ್ಸಿನ ರಾಜ್ಯದತ್ತ ನೋಡುವರು. ಕರಾಚಿಯಲ್ಲಿ ೧೯೩೧ ರಲ್ಲಿ ಕಾಂಗ್ರೆಸ್ಸು ಮೂಲಭೂತ ಹಕ್ಕುಗಳ ಒಂದು ಗೊತ್ತುವಳಿಯನ್ನು ಸ್ವೀಕರಿಸಿತು. ಅಂದೇ ತಿಂಗಳಿಗೆ ೫೦೦ ರೂಪಾಯಿಗಿಂತ ಹೆಚ್ಚು ಸಂಬಳವನ್ನು ಯಾವ ಸರಕಾರೀ ನೌಕರನೂ ಪಡೆಯತಕ್ಕದ್ದಲ್ಲವೆಂತು ಕಾಂಗ್ರೆಸ್ಸು ಸಾರಿತು. ಅಂದಿಗೂ ಇಂದಿಗೂ ಆರ್ಥಿಕ ಪರಿಸ್ಥಿತಿಯಲ್ಲಿ ಅತ್ಯಂತ ಬದಲಾವಣೆಯಾಗಿದೆ ಎಂಬ ಮಾತು ನಿಜವು. ಆಗಿನ ೫೦೦ ಹಾಗೂ ಈ ಹೊತ್ತಿನ ೨೦೦೦ ಸಮಾನವಾಗಿರಬಹುದು. ಆದರೆ ೨೦೦೦ ಎಲ್ಲಿ ೬೦೦೦ ಎಲ್ಲಿ? ಈಗ ಸರಕಾರದವರು ಕಟ್ಟುನಿಟ್ಟಾಗಿ (ಆದಾಯದ ಕರ ಹೋಗಲಾಗಿ) ೩೦೦೦ ರೂಪಾಯಿ ಸಂಬಳವನ್ನು ಗವರ್ನರರಿಗೆ ಕೊಡತಕ್ಕದ್ದೆಂದು ನಿರ್ಣಯಿಸಿರುವರು. ಹಾಗೂ ಆ ರೀತಿ ಸಾರಿರುವರು. ಕಡಿಮೆ ಸಂಬಳಕ್ಕೆ ಯೋಗ್ಯ ಜನರು ಸಿಕ್ಕಲಿಕ್ಕಿಲ್ಲ ಎಂಬ ಭಯವೂ ಇರುವದೆಂಬುದು ನಿಜ. ಆದರೂ ಜನರ ಮುಂದೆ ಯಾವ ಆದರ್ಶಗಳನ್ನಿಟ್ಟು ಕಾಂಗ್ರೆಸ್ಸು ಈ ವರೆಗೆ ಕೆಲಸ ಮಾಡುತ್ತ ಬಂದಿತೋ ಆ ಆದರ್ಶದ ಸಮಯ ಸಮೀಪವಾದರೂ ಕಾಂಗ್ರೆಸ್ಸು ಹೋಗಲು ಪ್ರಯತ್ನ ಮಾಡದಿದ್ದರೆ ಕಾಂಗ್ರೆಸ್ಸು ತನ್ನ ಸ್ಥಾನವನ್ನು ಕಳಕೊಳ್ಳಲು ತಡವಾಗದು. ಕಾಂಗ್ರೆಸ ಸರಕಾರವನ್ನು ಎಲ್ಲರೂ ಈ ಸಮಯದಲ್ಲಿ ಎತ್ತಿ ಹಿಡಿಯುವದು ಅತ್ಯವಶ್ಯವೆಂಬ ಮಾತು ನಿರ್ವಿವಾದವು. ಆದರೆ ಅದೇ ಕಾಲಕ್ಕೆ ಕಾಂಗ್ರೆಸ್ಸು ಜನತೆಯ ನಿಷ್ಠೆಯನ್ನು ಕಳಕೊಳ್ಳದಂತೆ ನಡಕೊಳ್ಳುವದೂ ಅಷ್ಟೇ ಅವಶ್ಯಕವಾದುದು.

## ಪಂಜಾಬದ ಹತ್ಯಾಕಾಂಡ

ಪಂಜಾಬದಲ್ಲಿ ಇನ್ನೂ ನಡೆದಿರುವ ಹತ್ಯಾಕಾಂಡವು ಎಲ್ಲಿ, ಹೇಗೆ, ಏಕೆ ಪ್ರಾರಂಭವಾಯಿತು ಎಂಬದನ್ನು ವಿಚಾರಿಸುತ್ತ ಕೂಡುವ ಸಮಯವು ಇದಲ್ಲ. ಅದು ಕ್ರಿಯಾ ಪ್ರತಿಕ್ರಿಯಾ ಸ್ವರೂಪದ್ದಿದೆ ಎಂಬುದು ನಿಜವಿದ್ದರೂ ಮೊದಲಿನ ಕ್ರಿಯೆ ಯಾರಿಂದಾಯಿತು ಎಂಬುದನ್ನು ಈಗ ನಿರ್ಧಯಿಸಿಯೂ ಫಲವಿಲ್ಲ. ಅಗಸ್ಟ ೧೦ ನೇ ತಾರೀಖಿನಿಂದ ಅದು ಪ್ರಾರಂಭವಾಗಿ ಈಗ ಅಖಂಡ ೧೫ ದಿನಗಟ್ಟಲೆ ನಡೆದಿದೆ. ಅದರ ಮುಖ್ಯ ಕಾರಣವೆಂದರೆ ಪೋಲೀಸರು ಹಾಗೂ ಸೈನಿಕರು ಸಹ ಅದರಲ್ಲಿ ಭಾಗವಹಿಸುತಿರುವದು! ಶಾಂತಿ ರಕ್ಷಣೆಯ ಹೊಣೆಯನ್ನು ಹೊತ್ತವರೆ ಈ ಪ್ರಕಾರ ಜಾತಿದ್ವೇಷದ ವಿಷದಿಂದ ಪ್ರೇರಿತರಾದರೆ ಮುಂದೆ ಗತಿಯೇನು ಎಂಬ ದೊಡ್ಡ ಪ್ರಶ್ನೆ ಆಡಳಿತಗಾರರ ಮುಂದೆ ನಿಲ್ಲುವದು. ಸಧ್ಯಕ್ಕಂತೂ ಪರಿಸ್ಥಿತಿ ಬಹಳ ನಾಜೂಕಾಗಿದೆ. ಇಷ್ಟೇ ಅಲ್ಲ. ಪಂಜಾಬದಿಂದ ಸಾವಿರಗಟ್ಟಲೆ ನಿರಾಶ್ರಿತರು ಪಾಕಿಸ್ತಾನದಿಂದ ಹಿಂದುಸ್ತಾನಕ್ಕೆ ಹಿಂದುಸ್ತಾನದಿಂದ ಪಾಕಿಸ್ತಾನಕ್ಕೆ ಹೋಗಹತ್ತಿರುವರು. ಅವರು ತಮ್ಮ ಅತ್ಯಂತ ದುಃಖದ ಸ್ಥಿತಿಯನ್ನು ಕಣ್ಣಾರೆ ಕಂಡ ಹಿಂಸಾಚಾರ ಬಣ್ಣಿಸಿ ಹೇಳುತಿರುವರು. ಆ ಕಥೆಗಳನ್ನು ಕೇಳಿ ಆಯಾ ಸ್ಥಳಗಳ ಜನರಲ್ಲಿ ಉದ್ರೇಕವು ಉಂಟಾಗುತಿರುವದು. ಅದರಿಂದ ದಿಲ್ಲಿ, ಕರಾಚಿ ಮುಂತಾದ ಪಟ್ಟಣಗಳಲ್ಲಿ ಕೂಡ ಯಾವಾಗ ಏನಾಗುವದೋ ಏನೊ ಎಂಬ ಪರಿಸ್ಥಿತಿಯುಂಟಾಗಿದೆ. ಇನ್ನೆಲ್ಲಿ ಶಾಂತವಾಗಿ ಬೇರುಕಿತ್ತುಬಿದ್ದ ಲಕ್ಷಾಂತರ ಜನರು ಪುನಃ ಮೂಲ ಸ್ಥಿತಿಗೆ ತಮ್ಮ ತಮ್ಮ ಹೊಟ್ಟೆ ಉದ್ಯೋಗವನ್ನು ಮಾಡಿಕೊಂಡು ಹೋಗಬೇಕಾದರೆ ಕನಿಷ್ಠ ಇನ್ನೂ ಆರುತಿಂಗಳುಗಳಾದರೂ ಬೇಕಾಗುವದೆಂಬಲ್ಲಿ ಸಂಶಯವಿಲ್ಲ.

ಪಂಜಾಬದ ಎರಡೂ ವಿಭಾಗಗಳಲ್ಲಿ ಈ ಹಿಂಸಾಚಾರವು ಬಹಳ ದೊಡ್ಡ ಪ್ರಮಾಣದ ಮೇಲೆ ನಡೆಯಿತು' ಹಾಗೂ ಇನ್ನೂ ನಡೆಯುತಿರುವದು. ಅಲ್ಲಿಯ ಕಥೆಗಳು ಅಲ್ಲಲ್ಲಿ ರೋಮಾಂಚಕಾರಿಯಾದ್ದು ಅವುಗಳಲ್ಲಿ ಎಷ್ಟೋ ನಿಜವೆನಿಸುವಂತೆ ಸಹ ಇಲ್ಲ ಆದರೆ ಮಾನವನು ದ್ವೇಷಪೂರಿತನಾದನೆಂದರೆ ಎಂಥ ಅಸುರನಾಗಬಲ್ಲನೆಂಬದನ್ನು ಈಗ ನೋಡಬಹುದು. ಇವು ಪಾಶವೀಕೃತ್ಯಗಳಿಗಿಂತ ಕಡೆ. ಪಶುಗಳು ಇಂಥ ಕೃತ್ಯಗಳನ್ನು ಎಂದೂ ಮಾಡಲಾರವು ಅವು ಬಹಳವಾದರೆ ಕೊಲೆ ಮಾಡುವವು ಅಷ್ಟೇ. ಆದರೆ ಪಂಜಾಬದಲ್ಲಿ ಕೊಲೆಯೊಡನೆ ಸುಲಿಗೆ, ಪೀಡನೆ, ಸ್ತ್ರೀ ಹಾಗೂ ಮಕ್ಕಳ ಅನನ್ವಿತ ಛಲನೆ, ಸುಡುವದು, ಅತ್ಯಾಚಾರ, ಅನಾಚಾರ ಇವು ದಿಕ್ಕಿಲ್ಲದೆ ನಡೆದು ಹೋದವು.

ಇದೆಲ್ಲ ಜಾತೀಯತೆಯ ಹಬ್ಬುಗೆಯ ವಿಷಫಲ. ಜಾತೀಯತೆಯು ಎಲ್ಲಿಗೆ ಮುಟ್ಟಬಹುದು ಎಂಬುದರ ಪ್ರತ್ಯಕ್ಷ ಚಿತ್ರವಿದು. ಕೊನೆಗೆ ಯಾರು ಇದನ್ನು ಪ್ರೋತ್ಸಾಹಿಸುತಿದ್ದರೊ ಅವರಿಗೆ ಅದು ಅಸುಕೊಳ್ಳದಾಯಿತು. ಇಷ್ಟೇ ಅಲ್ಲ ಪುಂಡರು ಅವರನ್ನೆದುರಿಸಲು ಕಡಿಮೆ ಮಾಡಲಿಲ್ಲ. ಇಂಥ ಉದಾಹರಣೆಗಳು ಕೂಡ ಅನೇಕ ಆಗಿವೆ. ಆದುದರಿಂದ ನಾವು ಇನ್ನೂ ಪಾಠವನ್ನು ಕಲಿಯದೆ ಹೋಗಿದ್ದರೆ ಈಗಲೂ ಕಲಿಯಲು ತಡವಾಗಿಲ್ಲ ಜಾತೀಯತೆ ಎಂಬ ವಿಷವು ಕೇವಲ ಹಿಂದೂ ಮುಸಲ್ಮಾನರಿಗೆ ಸೀಮಿತವಾಗಿಲ್ಲ. ಅದು ಹಿಂದುಸ್ತಾನದ ಎಲ್ಲ ಜಾತಿಗಳಲ್ಲಿಯೂ ತುಂಬಿಕೊಂಡಿದೆ. ಆದುದರಿಂದ ಆ ಜಾತೀಯತೆಯನ್ನು ಹೋಗಲಾಡಿಸುವಂಥ ಶಿಕ್ಷಣ, ಸಂಸ್ಕಾರ, ಮುಂತಾದವುಗಳ ಮೂಲಕ ಅದನ್ನು ನಿರ್ಮೂಲಿಸುವಂತೆ ಮಾಡುವದು ಸ್ವತಂತ್ರ ಹಿಂದುಸ್ತಾನದ ಪ್ರಥಮ ಕರ್ತವ್ಯವು ಹಾಗೂ ಹೊಣೆಯು.

## ಬಂಗಾಲದ ಮುನ್ನಡೆ

ಹತ್ಯಾಕಾಂಡದ ಪ್ರಾರಂಭವು ಬಂಗಾಲದಲ್ಲಿಯೆ (ಕಲಕತ್ತೆ ಹಾಗೂ ನೌಖಾಲಿ) ಆಯಿತು ಎಂಬುದು ನಿಜವಿದ್ದರೂ ಈಗ ಹೊಸ ಪಾಠವನ್ನಾದರೂ ಬಂಗಾಲವೇ ಕಲಿಸಲು ಮುಂದಾಗಿರುವದು ಸಮಾಧಾನದ ಸಂಗತಿಯು. ಮುಸ್ಲಿಂ ಲೀಗಿನವರು ೧೯೪೬ ರ ಅಗಸ್ಟ ೧೬ನೆ ತಾರೀಖನ್ನು 'ಪ್ರತ್ಯಕ್ಷ ಕ್ರಿಯೆ'ಯ (ಡಾಯರೆಕ್ಟ ಆ್ಯಕ್ಶನ್) ದಿನವೆಂದು ಸಾರಿದ್ದರು. ಅಂದಿನಿಂದ ಈ ಹತ್ಯಾಕಾಂಡದ ಪ್ರಾರಂಭವಾಯಿತು. ಪಂಜಾಬದಲ್ಲಿ ಆ ಹತ್ಯಾಕಾಂಡದ ಅತ್ಯಂತ ವಿಕೃತ ಸ್ವರೂಪವೂ ಪರಾಕಾಷ್ಠೆಯೂ ಕಂಡು ಬರುವದು. ಗಾಂಧೀಜಿಯವರ 'ಹರಿಜನ' ಪತ್ರಿಕೆಯಲ್ಲಿ ಬರೆದಂತೆ ಒಂದೇ ನೋಟಕ್ಕೆ ಚಮತ್ಕಾರವಾದಂತೆ ಕಲಕತ್ತೆಯ ಹಿಂದೂ ಮುಸಲ್ಮಾನರಲ್ಲಿ ಒಮ್ಮೆಲೆ ವಿಲಕ್ಷಣವಾದ ಸೌಹಾರ್ದತೆ ಹುಟ್ಟಿತು. ಈಗ ಹಿಂದೂ ಮುಸಲ್ಮಾನ ಸ್ತ್ರೀಯರು ಮಕ್ಕಳು ಕೂಡ ನಿರ್ಭಯತೆಯಿಂದ ಎಲ್ಲಕಡೆಯಲ್ಲಿಯೂ ಅಡ್ಡಾಡುತಿರುವರು. ಇದೇ ವಾತಾವರಣವು ಹೆಚ್ಚುತ್ತ ಹೋಗಿ ಇಡೀ ಬಂಗಾಲವನ್ನು ವ್ಯಾಪಿಸಿತು. ಪೂರ್ವ ಪಶ್ಚಿಮ ಬಂಗಾಲಗಳಲ್ಲಿ ಈ ರೀತಿ ಹಿಂದು ಮುಸಲ್ಮಾನರ ಸ್ನೇಹದ ವಾತಾವರಣವು ಸ್ಥಾಪಿತವಾದುದು ಕಂಡು ಬರುತಿರುವದು. ಈಗ ಮೂಡಿದ ಈ ಆಶಾಕಿರಣಗಳು ಹಿಂದುಸ್ತಾನಕ್ಕೆಲ್ಲ ವಿಶೇಷತಃ ಪಂಜಾಬಕ್ಕೆ ಬೆಳಕುಕೊಡುವವೆಂದು ನಾವು ಆಶಿಸಲು ಅಡ್ಡಿ ಇಲ್ಲ.

× × ×

ಸೀಮಾ ಸಮಿತಿಯವರು ತಮ್ಮ ತೀರ್ಪು ಕೊಟ್ಟ ಬಳಿಕ ಸಹ ಹತ್ಯಾಕಾಂಡವು ಒಂದೇ ಸವನೆ ನಡೆದುದನ್ನು ನೋಡಿದರೆ ಮಾನವ ಪ್ರಾಣಿಯು ಎಷ್ಟು ಹುಚ್ಚನಿರುವನೆಂಬದು ಕಂಡು ಬರುವದು ಈ ಬಗೆಯ ಕೊಲೆ ಸುಲಿಗೆ ಮತ್ತು ಆಸ್ತಿಯನಾಶ ಇವುಗಳಿಂದ ಏನಾದ ಲಾಭವಾಗಬಲ್ಲದೊ? ಉದಾಹರಣಾರ್ಥವಾಗಿ ಈಗ ಲಾಹೋರದಲ್ಲಿ ನೂರಾರು ಅಂಗಡಿಗಳು, ಮನೆಗಳು ಸುಟ್ಟು ಭಸ್ಮವಾದವು. ಅದರಿಂದ ಯಾರಿಗೆ ಲಾಭವಾಯಿತು? ಕಳಕೊಂಡವರಿಗೂ ಲಾಭವಿಲ್ಲ; ಸುಟ್ಟವರಿಗೂ ಲಾಭವಿಲ್ಲ. ಮೇಲಾಗಿ ಇವು ಎಲ್ಲವೂ ಸಾಮಾನ್ಯ ಜನರ ಮನೆ ಮಾರುಗಳು. ಈ ಹಿಂಸಾಚಾರ, ಧ್ವಂಸಾಚಾರ, ಅತ್ಯಾಚಾರ ಇವು ಲಾಭದಾಯಕವಲ್ಲ ಎಂಬದನ್ನರಿತುಕೊಂಡು ಕಲಕತ್ತೆಯವರು ಹಾಗೂ ಬಂಗಾಲದವರು ಬೇಗನೆ ಬುದ್ಧಿ ಕಲಿತುದು ಅಭಿನಂದನಾರ್ಹವು. ಇನ್ನು ಮುಂದೆ ಇದೇ ಹೆಜ್ಜೆ ಮುಂದೆ ಬೀಳಲಿ ಎಂದು ಹಿಂದೀಯರೆಲ್ಲರು ಹಾರೈಸಬೇಕು.

## ಆಂಗ್ಲಭಾಷೆಯ ಮೋಹ

(೬ ನೇ ಪುಟದಿಂದ)

ಇವುಗಳನ್ನು ನೋಡಿದೊಡನೆ ಇದು ನಮ್ಮ ದೇಶವೇ? ಎಂಬ ಸಂಶಯವೂ ಸುಳಿಯುವದು. ಮಂದಿರ, ಭಂಡಾರಗಳೆಲ್ಲ ಅಸ್ತವ್ಯಸ್ತವು. 'ಖಾದಿಯ' ಮತ್ತು ಅರಿವೆಯ ಅಂಗಡಿಗಳು ಈಗ ಸಿಗಲಾರವು. ಒಬ್ಬ ಹಳ್ಳಿಯ ರೈತ (ಭಾರತದ ನಿಜವಾದ ರಾಷ್ಟ್ರೀಯ ಪ್ರತಿನಿಧಿ ಸಹ "ಕೇಶ್" "ಟೇಮ್" ಎಂದುಚ್ಚರಿಸುವಂತಾಯಿತೆಂದರೆ-ಅದೂ ಈ ರಾಷ್ಟ್ರೀಯ ಜಾಗ್ರತಿಯುಗದಲ್ಲಿ-ದುಃಖವಾಗುವದು. "ನಾವಿನ್ನೂ ನಿದ್ರಿಸುತ್ತಿಲ್ಲ. ಎಚ್ಚತ್ತಿದ್ದೇವೆ, ನಮ್ಮ ಹೊಣೆ ಅರಿತಿದ್ದೇವೆ; ನಮ್ಮ ಪ್ರತಿಯೊಂದು ನಾಡಿಯಲ್ಲಿ ಜಾಗ್ರತಿ ಕುದಿಯುತ್ತಿದೆ" ಎನ್ನುವ ನಮ್ಮಲ್ಲಿ ಈ ಮೋಹ ಮಾತ್ರ ತುಸುವೂ ಮರೆಯಾಗಿಲ್ಲ.

ಇಂಗ್ಲೀಷರನ್ನೋಡಿಸಿದ ನಾವು ಇಂಗ್ಲೀಷಿನ ಮೋಹವನ್ನೋಡಿಸಲು ಸಿದ್ಧರಾಗಬಲ್ಲೆವೆ?

ಇಂದು ನಮಗೆ ಸ್ವಾತಂತ್ರ್ಯ ದೊರೆತಿದೆ. ನವಮನ್ವಂತರ ಸ್ಥಾಪಿತವಾಗಿದೆ. ಇನ್ನು ನಮ್ಮ ಬೇಡಿಕೆಗಳಿಗೆ ಪರರ ಮುಖನೋಡಬೇಕಾಗಿಲ್ಲ. ಅಂತರ್ರಾಷ್ಟ್ರೀಯ ಪರಿಷತ್ತಿನಲ್ಲಿ ರಾಷ್ಟ್ರಧ್ವಜವಿಲ್ಲದ್ದರಿಂದ ನಾಚಿಕೆಯಾಯಿತೆಂದು ಶ್ರೀಮತಿ ವಿಜಯಲಕ್ಷ್ಮಿ ಪಂಡಿತರು ಹೇಳಿದ್ದಕ್ಕಿಂತಲೂ ನಮಗೆ ರಾಷ್ಟ್ರಭಾಷೆಯುಲ್ಲೆಂಬದನ್ನು ನೆನೆಸಿಕೊಳ್ಳುವದು ಮತ್ತೂ ಹೀನವಾದ ಸಂಗತಿ.

ರಾಜ್ಯಸೂತ್ರ ನಮ್ಮ ಕೈಯಲ್ಲಿ ಬಂದೊಡನೆ ರಾಷ್ಟ್ರಧ್ವಜವನ್ನು ನಿರ್ಮಿಸಿಕೊಂಡಂತೆ ರಾಷ್ಟ್ರಭಾಷೆಯನ್ನೂ ತಡವಿಲ್ಲದೆ ನಿರ್ಮಿಸಿಕೊಂಡು ಆಡಳಿತ ಸಾಗಿಸಬೇಕು. ಎಲ್ಲ ಶಾಲೆ ಕಾಲೇಜುಗಳಲ್ಲಿ ಸಹ ಒತ್ತಾಯದಿಂದ ಈ ಕ್ರಮ ಅಮಲಿನಲ್ಲಿ ತರಬೇಕು.

ಇಂದಿನ ನಮ್ಮ ನವ ರಾಜ್ಯಾಧಿಕಾರಿಗಳು ಎಲ್ಲ ಪ್ರಾಂತ ಭಾಷೆಗಳನ್ನರಿಯದಿದ್ದರೂ ಒಂದೇ ಆದ ರಾಷ್ಟ್ರಭಾಷೆಯನ್ನಾದರೂ ಚೆನ್ನಾಗಿ ಅರಿತು ಇರುವದು ಅತಿ ಅವಶ್ಯ. ಹಾಗಿರದಿದ್ದರೆ ಈ ಅಶಿಕ್ಷಿತ ಪ್ರಜೆಗಳ ದೂರು ಅವರಿಗೆ ಕೇಳಿಸದೆ ಪುನಃ ಹಿಂದಿನದೇ ಮುಂದೆ ಸಾಗಿದಂತಾಗದಿರದು.

## ಸುದ್ದಿಗಳು

ಲಾಹೋರಿಗೆ ಹೊರಟಿದ್ದ ಪಂಜಾಬ ಮೇಲ್ ಗಾಡಿಯನ್ನು ನಡುವೆ ೨ ಸಾರೆ ತಡೆಯಲಾಯಿತು. ಗಾಡಿಯು ಫರೀದಕೋಟೆಯನ್ನು ತಲುಪಿದೊಡನೆ ಒಂದು ಪಂಗಡದ ಪುಂಡರು ಅದನ್ನು ತಡೆದರು ಮತ್ತು ಮುಂದೆ ಮತ್ತೊಂದು ಪಂಗಡದವರು ಗಾಡಿಯನ್ನು ನಿಲ್ಲಿಸಿದರು. ಅನೇಕರಿಗೆ ಗಾಯವಾಯಿತು. ಲಾಹೋರನ್ನು ಮುಟ್ಟಲು ಬಹಳ ತಡವಾಯಿತು.

ವಿಮಾನದಿಂದ ಮೈಸೂರ ನಗರದ ಚಿತ್ರಗಳನ್ನು ತೆಗೆದುಕೊಳ್ಳುವುದರ ಸಲುವಾಗಿ ಸರಕಾರದವರು ೬ ಸಾವಿರ ರೂಪಾಯಿಗಳನ್ನು ತೆಗೆದಿಟ್ಟಿದ್ದಾರೆ.

ಮಲ್ಲೇಶ್ವರಕ್ಕೆ ಸೇರಿದ ರಂಗನಾಥಪುರದ ಮಿತ್ರಮಂಡಲದವರು ಕಂಟ್ರಾಕ್ಟರ ಶ್ರೀ. ಬಿ. ತಾಯಪ್ಪನವರ ಅಧ್ಯಕ್ಷತೆಯಲ್ಲಿ ಸ್ವಾತಂತ್ರ್ಯೋತ್ಸವ ದಿನವನ್ನಾಚರಿಸಿದರು.

ಮಲ್ಲೇಶ್ವರದ ಗೋಪಾಲ ಕೃಷ್ಣಸ್ವಾಮಿ ದೇವಸ್ಥಾನದ ಬಳಿ ಇರುವ ಸಂಸ್ಕೃತ ಪಾಠ ಶಾಲೆಯಲ್ಲಿ ಮಾಧ್ಯಮಿಕ ಶಾಲೆ ಹಾಗೂ ಹೈಸ್ಕೂಲುಗಳ ವಿದ್ಯಾರ್ಥಿಗಳ ಅನುಕೂಲಕ್ಕಾಗಿ ಸಂಸ್ಕೃತ ಪಾಠದಲ್ಲಿ ತರಬೇತು ಕೊಡಲು ಮಲ್ಲೇಶ್ವರ ಸಂಸ್ಕೃತ ಸಂಘದವರು ಏರ್ಪಡಿಸಿದ್ದಾರೆ.

ಅಗಸ್ಟ ೨೨ ರಲ್ಲಿ ಮೈಸೂರು ಮಂತ್ರಿಮಂಡಲದ ಸಭೆಯು ದಿವಾಣಬಹದ್ದೂರ್ ಡಾ. ಟಿ. ಸಿ ಎಂ ರಾಯನ್ನರ ಅಧ್ಯಕ್ಷತೆಯಲ್ಲಿ ಬೆಂಗಳೂರಲ್ಲಿ ಸೇರಿ ಮೈಸೂರು ಕಾಂಗ್ರೆಸ್ಸಿನ ಸತ್ಯಾಗ್ರಹದ ನಿರ್ಣಯ ಮತ್ತು ಅದಕ್ಕೆ ಸಂಬಂಧಪಟ್ಟ ವಿಷಯ ಹಾಗೂ ಸತ್ಯಾಗ್ರಹ ತಡೆಯಲು ಸರಕಾರ ಕೈಕೊಳ್ಳಬೇಕಾದ ಕಾರ್ಯನೀತಿ ಇವುಗಳನ್ನು ಪುನಃ ಪರಿಶೀಲಿಸಲಾಯಿತೆಂದು ಗೊತ್ತಾಗಿದೆ.

ಚಿಕ್ಕ ಕಥೆ



# ಹೃದಯಹೀನರಾರು?

ಶ್ರೀ. ವ. ನಾ. ಸರದೇಸಾಯಿ, ಅನುವಾದಕರು

ಅದೊಂದು ಮುಚ್ಚಂಜೆ. ಬೆಂಗಳೂರಿನ ಕೆನ್‌ಸಿಂಗ್ಟನ್ ಪಾರ್ಕಿನ ಕೆರೆಯ ಒಂದು ತುದಿಯಲ್ಲಿ ನಾವು ಕುಳಿತಿದ್ದೆವು. ಸೂರ್ಯನು ತನ್ನ ರಾಣಿಯನು ಬಿಟ್ಟು ಬಹಳ ಬೊತ್ತಾಯಿತೆಂದು ತಿಳಿದು ಕೆಂಪು ರೇಶಿಮೆಯ ವಸ್ತ್ರವನ್ನು ಧರಿಸಿ ತನ್ನ ರಮಣಿಯ ಕಡೆಗೆ ಸುಖಸಲ್ಲಾಪವನ್ನಾಡಲು ನಡೆದ ಹೊತ್ತು. ಆ ಕೆಂಪು ವಸ್ತ್ರದ ಪ್ರಕಾಶವೇ ಕೆನ್‌ಸಿಂಗ್ಟನ್ ಪಾರ್ಕಿನ ಹುಲ್ಲುಗದ್ದೆಯ ಮೇಲೆ ಬಿದ್ದು ಒಂದು ಪ್ರಕಾರದ ಮನಮೋಹಕವಾದ ನೋಟವನ್ನೇ ಮಾಡಿತ್ತು. ಆ ಹೊತ್ತು ಸೂರ್ಯನ ಪ್ರಣಯಿನಿಯ ಭೆಟ್ಟಿಯ ಹೊತ್ತು! ಅಂದ ಮೇಲೆ ಮಾನವರನ್ನು ಕೇಳುವದೇನು? ಪ್ರಣಯಿ ಪ್ರಣಯಿನಿಯರಿಬ್ಬರೂ ಕೂಡಿಯೇಬಿಟ್ಟಿದ್ದರು! ಜನಪ್ರವಾಹವು ಆ ತುದಿಯಿಂದ ಈ ತುದಿಯವರೆಗೆ ತುಂಬಿ ಹರಿಯುತ್ತಲಿತ್ತು. ಒಂದು ಕಡೆಗೆ ಹಿಂದು ಸ್ತ್ರೀಯರು ತಮ್ಮ ಮಕ್ಕಳನ್ನು ತೆಗೆದುಕೊಂಡು ಗಂಡಸರನ್ನು ಕಂಡಕೂಡಲೇ ನಾಚಿ ಭೂಮಿತಾಯಿಯನ್ನೆ ನೋಡುತ್ತ ತಮ್ಮ ಸೆರಗಿನಿಂದ ಮೋರೆಯನ್ನು ಮುಚ್ಚಿಕೊಳ್ಳುತ್ತ ನಡೆದಿದ್ದರು. ಮತ್ತೊಂದು ಕಡೆಗೆ ಆಂಗ್ಲ ರಮಣಿಯರು ಕುದುರೆಯನ್ನು ಏರಿ, ಅದನ್ನು ಚಬಕದಿಂದ ಹೊಡೆಯುತ್ತ ಸೆಟೆದು ಹೋಗುತ್ತಿದ್ದರು. ಒಮ್ಮೊಮ್ಮೆ ಅವರ ಚಬಕದ ಕೈಚಳಕವನ್ನು ಹಿಂದು ಗಂಡಸರು ಕಾಣುತ್ತಿದ್ದರು. ಮತ್ತೊಂದು ಕಡೆಗೆ ಹೊಟ್ಟೆಯ ಸಾವುಕಾರರು ತಮ್ಮ ಹೊಟ್ಟೆಯನ್ನು ತೋರಿಸುತ್ತ ಮುಂದೆ ನಡೆದಿದ್ದರು. ಮತ್ತೊಂದು ಕಡೆಗೆ ಆಂಗ್ಲರು, ಈ ಹಿಂದೂ ಜನರನ್ನು ದಾಸ್ಯದ ಕಾಲಿನ ಬುಡದಲ್ಲಿ ಹಾಕಿ ತುಳಿಯುತ್ತಿದ್ದರೂ ಏನೋ ಎಂಬಂತೆ, ಅಧ್ಯೃತೆಯಿಂದ ನಡೆಯುತ್ತಲಿದ್ದರು. ಬರಬರುತ್ತ ನಿಶಾದೇವಿಯು ತನ್ನ ಸೆರಗಿನಲ್ಲಿ ಜಗತ್ತನ್ನು ಮುಚ್ಚಿಕೊಳ್ಳಹತ್ತಿದಳು. ಅದೇ ಕಾಲಕ್ಕೆ ಮೋಡಗಳು ಗರ್ಜನೆಯನ್ನು ಮಾಡುತ್ತ ಬಂದು ಮುಸುಕಿದವು. ಸಣ್ಣಾಗಿ ಹನಿಗಳು ಇಳಿಯಹತ್ತಿದವು. ಒಂದು ದೊಡ್ಡ ಹನಿಯು ನನ್ನ ಕಾಲಮೇಲೆ ಬಿತ್ತು. 'ಅಬ್ಬಾ'! ಎಂದೆ. ಬರಬರುತ್ತ ಚಳಿಯೆನಿಸಹತ್ತಿತ್ತು. ನಾನು ಮತ್ತು ನನ್ನ ಗೆಳೆಯನು ಕೋಟನ್ನು ಧರಿಸಿದ್ದೆವು. ಆದರೂ ಅದರ ಮೇಲೊಂದು ಕಂಬಳಿಯಿದ್ದಿದ್ದರೆ ಒಳ್ಳೆಯದಾಗುತ್ತಿದ್ದಿಲ್ಲವೇ? ಎಂದೆವು. ಆ ಜನಪ್ರವಾಹವು ಎಲ್ಲಿಯೋ ಮುಳುಗಿಹೋಯಿತು. ಆ ನಿಶಾಸಾಗರದಲ್ಲಿ ನಾವಿಬ್ಬರೇ ಉಳಿದುಕೊಂಡೆವು. ಅದೇ ಹೊತ್ತಿಗೆ ಗಂಟೆಗಳು ನಮ್ಮ ಕಿವಿಗಳ ಮೇಲೆ ಬಿದ್ದವು.

"ಎಂಟು ಹೊಡೆಯಿತೆ?" ನಾನೆಂದೆ.

"ಹೌದು" ನನ್ನ ಗೆಳೆಯ ಪ್ರಲ್ಹಾದ ಉತ್ತರವಿತ್ತ.

ನಾವಿಬ್ಬರೂ ಆ ಜಾಗದಿಂದ ಎದ್ದೆವು. ಸಾವಕಾಶವಾಗಿ ಆ ಕಗ್ಗತ್ತಲೆಯಲ್ಲಿ ಸಾಗುತ್ತಿದ್ದೆವು. ವಿದ್ಯುದ್ದೀಪಗಳು ಕೆರೆಯ ಅಂಚಿನ ಮೇಲೆ ಮಿಂಚಿನ ಹುಳಗಳಂತೆ ಮಿನುಗುತಿದ್ದವು. ಅಗಾಧವಾದ ಕತ್ತಲೆಯಲ್ಲಿ ಯಾವದೋ ಒಂದು ಅಸ್ಪಷ್ಟವಾದ ವ್ಯಕ್ತಿಯು ಸಾಗಿಬರುತ್ತಲಿತ್ತು.

"ಇಲ್ಲಿಯೇ ಮರೆಯಾಗಿ ನಿಲ್ಲೋಣ" ನನ್ನ ಗೆಳೆಯನೆಂದ. ಆ ವ್ಯಕ್ತಿಯು ಸಾವಕಾಶವಾಗಿ ನಮ್ಮೆಡೆಗೆ ಬರುತ್ತಲಿತ್ತು. ಅರಗಳಿಗೆಯಲ್ಲಿಯೇ ನಮ್ಮ ಮುಂದೆಯೆ ಸಾಗುತ್ತಲಿತ್ತು. ಆ ಮುಸುಮುಸುಕಾದ ಪ್ರಕಾಶದಲ್ಲಿ ಅವನ ಶರೀರವು ಸ್ಪಷ್ಟವಾಗಿ ಕಾಣುತ್ತಿತ್ತು. ಅವನೊಂದು ಹದಿಮೂರು ವರುಷದ ಹಸುಗೂಸು. ತಲೆಯಲ್ಲಿ ಕೆದರಿದ ಕ್ರಾಪು. ಆ ಮಾಸಿದ ಕೂದಲುಗಳು ಎಷ್ಟು ತಿಂಗಳುಗಳ ಹಿಂದೆ ಎಣ್ಣೆಯನ್ನು ಕಂಡಿದ್ದವೋ ಯಾರು ಬಲ್ಲರು! ಮೈಯೊಳಗೊಂದು ಹರಕು ಚಿಂದಿಯಾದ ಅಂಗಿ, ಒಂದು ಹರಕು ನಿಕ್ಕರು! ಥಂಡಿಯಿಂದ ಅವನ ಹಲ್ಲುಗಳು 'ಕಟಕಟಿ' ಶಬ್ದ ಮಾಡುತಿದ್ದವು. "ಲೋ, ಯಾರಲ್ಲಿ?" ನಾನೆಂದೆ. ಆ ವ್ಯಕ್ತಿ ಸಾವಕಾಶವಾಗಿ ನಮ್ಮೆಡೆಗೆ ಸಾಗಿ ಬಂತು. ನಾನು ಕೇಳಿದೆ, "ಎಲ್ಲಿಗೆ ಹೊರಟಿರುವೆ?" "ಕಾಲನ ಕಾಲಚಕ್ರದಲ್ಲಿ" ಅವನೆಂದ.

"ನಿನ್ನೂರಾವುದು" ನಾನೆಂದೆ.

"ಇಲ್ಲಿಯೇ ಒಂದು ಸಮೀಪದ ಹಳ್ಳಿಯವ" ಅವನೆಂದ.

"ಇಲ್ಲಿಗೇತಕ್ಕೆ ಬಂದೆ?" ಎಂದು ನಾನು ಪ್ರಶ್ನೆ ಮಾಡಿದೆ.

"ಇಲ್ಲಿ ಹೊಟ್ಟೆ ತುಂಬಿಸಿಕೊಳ್ಳಲಿಕ್ಕೆ" ಅವನೆಂದ.

"ಏಕೆ ನಿನ್ನ ತಂದೆಯ ಬಡತನದ ಬಾಳುವೆಯೆ ಇದಕ್ಕೆ ಕಾರಣವೇನು?" ನನ್ನ ಗೆಳೆಯ ಪ್ರಶ್ನೆ ಹಾಕಿದ.

"ಅಲ್ಲ. 'ಬಡತನ' ಶಬ್ದವು ನನಗೆ ಗೊತ್ತಿರಲಿಲ್ಲ. ನನ್ನ ತಂದೆಯು ಆ ಹಳ್ಳಿಯ ಒಬ್ಬ ಪ್ರತಿಷ್ಠಿತ ಶ್ರೀಮಂತ. ನನ್ನ ನಿಜವಾದ ತಾಯಿಯು ನಾನು ೭-೮ ವರುಷದವನಿರುವಾಗಲೇ ಬಿಟ್ಟು ಪರಂಧಾಮವನ್ನೈದಿದಳು. ಆ ಮೇಲೆ ಕೇಳುವದೇನು? ನಮ್ಮ ಮನೆಯಲ್ಲಿ ಮಲತಾಯಿಯ ಪ್ರವೇಶವಾಯಿತು.

ಆ ರಾಕ್ಷಸಿಯು ನನ್ನನ್ನು ಎಡೆಬಿಡದೆ ಕಾಡಹತ್ತಿದಳು. ಡ್ಯಾಮುವ್ವನ ಕಾಟ ಮಲತಾಯಿಯ ಕಾಟಕ್ಕಿಂತ ಒಂದು ಗುಂಜಿ ಕಡಿಮೆಯೆನ್ನಬಹುದು. ನಾನು ಸಾಲೆ ಬಿಟ್ಟು ಬರುವದೊಂದೇ ತಡ ನನಗೆ ಪ್ರಹಾರಗಳು ಸಿಗುತ್ತಿದ್ದವು. ನೀರು ಜಗ್ಗುವದು, ಅರೆಹೊಟ್ಟೆ ಊಟ! ಅಪ್ಪನ ಮುಂದೆ ಹೇಳಬೇಕೆಂದರೆ ನನಗಿಂತ ಮೊದಲೇ ಆಕೆಯು ಅವನ ಕಿವಿಯನ್ನೂದುತ್ತಿದ್ದಳು. ಅವನಿಂದ ಸಿಗುವದೂ ನನಗೆ ಬೈಗುಳ. ಹೀಗಾಗಿ ನನಗೆ ಮನೆಯೆಂದರೆ ಒಂದು ನರಕದಂತೆ ಕಾಣಿಸಹತ್ತಿತು. ನಾನು ಮತ್ತು ನನ್ನ ಗೆಳೆಯನೂ ಕೂಡಿ ಓಡಿಹೋಗುವ ವಿಚಾರ ಮಾಡಿದ್ದೆವು ಮತ್ತು ಅಂದೇ ರಾತ್ರಿಯಲ್ಲಿ ಮನೆಯನ್ನು ಬಿಟ್ಟೆವು. ಇಲ್ಲಿಗೆ ಬಂದೆವು. ನಾನು ಇಲ್ಲಿಯ ಒಂದು ಅಂಗಡಿಯಲ್ಲಿ ಕೆಲಸ ಮಾಡುತ್ತಿದ್ದೆನು. ನನ್ನ ಗೆಳೆಯನೂ ಒಂದು ಅಂಗಡಿಯಲ್ಲಿ ಕೆಲಸ ಮಾಡುತ್ತಿದ್ದ." ಹೀಗೆಂದು ಸುಮ್ಮನಾದ ಆ ಹುಡುಗ.

"ಈಗ ನಿನ್ನ ಗೆಳೆಯನೆಲ್ಲಿದ್ದಾನೆ" ಎಂದು ನನ್ನ ಗೆಳೆಯ ಅವನನ್ನು ಪ್ರಶ್ನಿಸಿದ.

ಅವನ ಕಣ್ಣುಗಳಲ್ಲಿ ನೀರು ಬಂದವು ಗಂಟಲು ಬಿಗಿದುಬಂದಿತು. "ಸ್ವರ್ಗದಲ್ಲಿ" ಎಂದು ಪ್ರಯಾಸದಿಂದ ಉತ್ತರವಿತ್ತ.

"ಅವನಿಗೇನಾಗಿತ್ತು?" ನಾನು ಪ್ರಶ್ನಿಸಿದೆ.

"ಮೊನ್ನಿನ ಪ್ಲೇಗಿನ ಹಾವಳಿಯಲ್ಲಿ ಸಿಕ್ಕ ಅವನಿಗೂ ಪ್ಲೇಗೂ ಬಂತು. ನಾನು ಮೂರು ನಾಲ್ಕು ಡಾಕ್ಟರರ ಮನೆಗೆ ಎಡತಾಕಿದೆ. ಹಣವಿಲ್ಲದವನ ಬಾಳು ಹಾಳು. ಎಲ್ಲರಿಂದಲೂ ನಿರಾಶೆಯ ಉತ್ತರ. ನಾನು ನನ್ನ ಗೆಳೆಯನ ಕಡೆಗೆ ಬಂದೆ. ಅವನು ನನ್ನ ಕಡೆಗೆ ಒಂದು ಪ್ರೇಮಪೂರ್ಣ ದೃಷ್ಟಿಯನ್ನು ಬಿಟ್ಟು ಮತ್ತೆಂದನು, "ಗೆಳೆಯಾ ನೀನು ಇನ್ನು ಊರಿಗೆ ಹೋಗು ಇಲ್ಲಿರಬೇಡ. ನಿನ್ನ ಗತಿಯೂ ನನ್ನಂತೆಯೇ ಆಗುವದು" ಎಂದು ಹೇಳಿ ಮಲಗಿದನು. ಕಡೆಯ ತನಕ ಮಲಗಿಯೇ ಬಿಟ್ಟ."

"ನೀನು ಈಗ ಆ ಅಂಗಡಿಯಲ್ಲಿಯೇ ಕೆಲಸ ಮಾಡುತ್ತಿರುವೆಯೊ?" ನಾನು ಪ್ರಶ್ನಿಸಿದೆ.

"ಇಲ್ಲ. ಜಗತ್ತು ನಿರ್ದಯವಿದೆ. ಯಾರ ಹಕ್ಕುಗಳೂ ಇಲ್ಲಿ ನಡೆಯುವದಿಲ್ಲ. ನಾನು ನನ್ನ ಪಗಾರವನ್ನು ಹೆಚ್ಚಿಸುವದರ ಸಲುವಾಗಿ ಮಾಲಕರನ್ನು ಕೇಳಿದೆ. ಅವನು ಸಿಟ್ಟಿಗೆದ್ದು ನನ್ನನ್ನು ಕೆಲಸ ಬಿಡಿಸಿಯೇ ಬಿಟ್ಟ. ಮೊನ್ನೆಯೇ ನಾನು ಕೆಲಸ ಬಿಟ್ಟೆ. ನಾನು ಮತ್ತೊಂದು ನೌಕರಿಯ ಸಲುವಾಗಿ ತಿರುಗಾಡುತ್ತಿದ್ದೇನೆ."

"ಹಾಗಾದರೆ ನಾನೊಂದು ಕೊಡಿಸುತ್ತೇನೆ. ಮಾಡುತ್ತಿಯೋ?" ನನ್ನ ಗೆಳೆಯನೆಂದ. 'ಒಹೋ' ಎಂದ ಹುಡುಗ.

ಆಗ ಸುಮಾರು ೧೦ ಗಂಟೆಯಾಗಿತ್ತು. ನಾವೆಲ್ಲರೂ ಕೂಡಿ ಸುಭಾಸ ಚೌಕಿನತ್ತ ನಡೆದವು. ಅಲ್ಲಿ ನಮ್ಮ ಗೆಳೆಯರಾದ ರಾಮರಾಯರು ಇರುತ್ತಿದ್ದರು. ಅಲ್ಲಿ ಹೋಗಿ ಅವರ ಮನೆಗೆ ಹೋದೆವು. ಆಗ ರಾಮರಾಯರು ಮಂಚದ ಮೇಲೆ ಮಲಗಿದ್ದರು. ಒಂದು ಶಾಲನ್ನು ಹೊದೆದುಕೊಂಡಿದ್ದರು. ನಾನು ಒದರುತ್ತಲೇ ಅವರು ಜೋಡುಗಳನ್ನು ಹಾಕಿಕೊಂಡು ಹೊರಗೆ ಬಂದರು. "ನಿಮಗೆ ಚಾಕರಿಯ ಒಬ್ಬ ಹುಡುಗನು ಬೇಕು ಎಂದು ಹೇಳಿದ್ದಿಲ್ಲವೇ?" ಎಂದ ನನ್ನ ಗೆಳೆಯ. ಅವರು ಹೂಂಗೊಟ್ಟರು.

"ಹಾಗಾದರೆ ನಾನೊಂದು ಹುಡುಗನನ್ನು ತಂದಿದ್ದೇನೆ ಇಟ್ಟುಕೊಳ್ಳುವಿರೋ?" ನಾನೆಂದೆ.

"ಛೂ ಈ ಹಳ್ಳಿಯ ಹುಡುಗರನ್ನು ಎಂದೂ ಇಟ್ಟುಕೊಳ್ಳಬಾರದು. ಇವರ ಪರಿಚಯವಿರುವದಿಲ್ಲ. ಮೊನ್ನೆ ನಮ್ಮ ಮೇಲಿನ ಮನೆಯ ಶೆಟ್ಟಿಯು ಯಾವದೋ ಒಂದು ಹಳ್ಳಿಯ ಹುಡುಗನನ್ನು ಇಟ್ಟುಕೊಂಡಿದ್ದ. ಅವನಿಗೆ ಮನೆಯ ಪರಿಚಯವಾದ ಕೂಡಲೇ ಆ ಶೆಟ್ಟಿಯ ಬೆಳ್ಳಿಯ ಥಾಲಿಯನ್ನೇ ಕದ್ದೊಯ್ದ. ಇದಕ್ಕೆ ಯಾರು ಹೊಣೆ? ನೀವು ಇವನ ಜಾಮೀನು ಕೊಡುವಿರೋ?" ಎಂದರು ರಾಮರಾಯರು. 'ಜಾಮೀನು' ಎಂಬ ಶಬ್ದವನ್ನು ಕೇಳಿದ ಕೂಡಲೇ ನಮಗೆ ದಿಗಿಲು ಬಿದ್ದಿತು. ನಾವು ನಿರಾಶೆಯಿಂದ ಮನೆಯ ಕಡೆಗೆ ಹೊರಳಿದೆವು. "ನೀನು ನೆಹರೂ ರೋಡನ್ನು ನೋಡಿರುವಿಯಲ್ಲವೇ? ನಾಳೆ ಮುಂಜಾನೆ ಅಲ್ಲಿಗೆ ಬಾ, ಎಂದರೆ ನಾವು ನಿನಗೆ ಎಲ್ಲಿಯಾದರೂ ನೋಕರಿ ಹುಡುಕಿ ಕೊಡುತ್ತೇವೆ" ಎಂದು ಹುಡುಗನಿಗೆ ಆಶ್ವಾಸನ ಕೊಟ್ಟೆವು.

ಆ ಹುಡುಗನು ಸಣ್ಣ ಮೋರೆ ಮಾಡಿದ. ಮತ್ತು "ನಾಲ್ಕಾಣೆ ಇದ್ದರೆ ಕೊಡಿರಿ, ಎರಡು ದಿವಸಗಳಿಂದಲೂ ಹೊಟ್ಟೆಗೆ ಒಂದು ತುತ್ತು ಅನ್ನವಿಲ್ಲ. ಹಸಿವೆ ಬಹಳವಾಗಿದೆ. ಏನನ್ನಾದರೂ ತೆಗೆದುಕೊಂಡು ತಿನ್ನುವೆನು" ಎಂದ.

ನಾನು ನನ್ನ ಕಿಸೆಯಲ್ಲಿ ಹುಡುಕಾಡಿದೆ. ಒಂದು ಕಾಸೂ ಕೈಗೆ ಹತ್ತಲಿಲ್ಲ. ನಾಲ್ಕಾಣೆ ಇದ್ದರೆ ಕೊಡು ಎಂದು ನನ್ನ ಗೆಳೆಯನಿಗೆಂದೆ.

ಅವನು ತನ್ನ ಕೋಟಿನ ಜೇಬಿನಲ್ಲಿ ಕೈಹಾಕಿ ನೋಡಿದ "ನಾಲ್ಕಾಣೆ ಇಲ್ಲ ೫ ರೂಪಾಯಿಯ ನೋಟಿದೆ" ಎಂದು ಇಂಗ್ಲೀಷಿನಲ್ಲಿ ಹೇಳಿದ.

"ಹೋಗಲಿ ಕೊಟ್ಟು ಬಿಡೋ" ಇಂಗ್ಲೀಷಿನಲ್ಲಿ ನಾನೆಂದೆ.

"ಛೇ ಹಾಗೆ ಕೊಟ್ಟರೆ ೧೫ ದಿವಸಗಳ ಚಹಾ ಬಂದ" ಎಂದು ಇಂಗ್ಲೀಷಿನಲ್ಲಿಯೇ ಹೇಳಿದ ಪಾಪ. ಆ ಹುಡುಗನ ಕಣ್ಣುಗಳು ಆಶಾಪೂರ್ಣ ದೃಷ್ಟಿಯಿಂದ ನಮ್ಮಿಬ್ಬರ ಮುಖಗಳನ್ನೇ ನೋಡುತ್ತಿದ್ದವು.

"ಈಗ ನಮ್ಮ ಹತ್ತರ ಏನೂ ಇಲ್ಲ. ನಾಳೆ ಬಾ, ನವಕರಿಯನ್ನು ಹುಡುಕಿ ಕೊಡುತ್ತೇವೆ" ನಾನೆಂದೆ.

"ಎಲ್ಲಿ ಮಲಗುವೆ? ಅಂದ ನನ್ನ ಗೆಳೆಯ.

"ಇಲ್ಲಿಯೇ ಯಾವದಾದರೊಂದು ಅಂಗಡಿಯ ಕಟ್ಟೆಯ ಮೇಲೆ" ಎಂದವನೆ ನಡೆದೇಬಿಟ್ಟ. ಬರಬರುತ್ತ ಆ ಘೋರಾಂಧಕಾರದಲ್ಲಿ ಕಣ್ಣಿಗೆ ಕಾಣದಾದ.

ನಾವು ಮನೆಯ ಕಡೆಗೆ ನಡೆದವು "ಬಹಳ ಥಂಡಿಯಿದೆ" ನನ್ನ ಗೆಳೆಯನೆಂದ. "ಮನೆಗೆ ನಡೆ ಎರಡು ಕಂಬಳಿ ಹೊತ್ತುಕೋ" ನಾನೆಂದೆ.

ಮನೆಗೆ ಹೋಗಿ ಬೆಚ್ಚಗೆ ಮಲಗಿಕೊಂಡೆವು. ರಾತ್ರಿಯಲ್ಲಿ ಮಳೆಯು ಬೀಳುತ್ತಲೇ ಇತ್ತು. ಆಣೆಕಲ್ಲುಗಳ ಸಪ್ಪಳ ಮೇಲಿಂದ ಮೇಲೆ ಆಗುತ್ತಿತ್ತು. ನಡುನಡುವೆ ಮೇಘಗಳ ಗರ್ಜನೆಯೂ ಆಗುತ್ತಿತ್ತು.

ಬೆಳಗಾಯಿತು, ೬ ಹೊಡೆಯಿತು. ನಾನೂ ನನ್ನ ಗೆಳೆಯನೂ ಎದ್ದು ಮುಖಮಾರ್ಜನ ಮಾಡಿದೆವು. ಆ ಹುಡುಗನ ದಾರಿಯನ್ನು ನೋಡುತ್ತ ಕುಳಿತೆವು.

"ರಾತ್ರಿಯಲ್ಲಿ ಆಣೆಕಲ್ಲುಗಳು ಬಹಳ ಬಿದ್ದವು" ಎಂದ ನನ್ನ ಮಿತ್ರ.

"ಒಂದು ಸಿಡಿಲು ಬಿತ್ತು" ನಾನೆಂದೆ.

ಅಷ್ಟರಲ್ಲಿ ಆಹೊಡೆದದ್ದು ನಮಗೆ ಕೇಳಬಂತು. ನಾವು ಮೋಟಾರ ಸ್ಟ್ಯಾಂಡಿನ ಕಡೆಗೆ ನಡೆದೆವು. ಅಲ್ಲಿ ಹೋಗುತ್ತಲೇ ಯಾವದೋ ಒಂದು ಹುಡುಗನು ಆ ಗಿಡದ ಬುಡದಲ್ಲಿ ಸಿಡಿಲುಬಡಿದು ಸತ್ತಿರುತ್ತಾನೆಂದು ತಿಳಿಯಿತು. ಯಾರ್‍ಯಿದನ್ನು ನೋಡಬೇಕೆಂಬ ಕುತೂಹಲವು ನಮ್ಮನ್ನು ಅಲ್ಲಿಗೆ ಎಳೆದೊಯ್ಯಿತು. ನೋಡಿದಷ್ಟರಲ್ಲಿ ನನಗೆ ಒಮ್ಮೆಲೆ ಚಕ್ರ ಬಂದಿತು. ರಾತ್ರಿಯಲ್ಲಿ ಭೆಟ್ಟಿಯಾದ ಹುಡುಗನೇ ಅವನು! ನಿಸರ್ಗದೇವತೆಯು ಆ ಹಸುಗೂಸನ್ನು ತನ್ನ ಮಡಿಲಲ್ಲಿ ಮಲಗಿಸಿಕೊಂಡಿದ್ದಳು. ಮೇಲೆ ಆಣೆಕಲ್ಲುಗಳ ಹೊದಿಕೆಯನ್ನು ಹೊಚ್ಚಿದ್ದಳು. ಪಾಪ! ಆ ದೊಡ್ಡ ಗಿಡದ ಬೊಡ್ಡೆಯಲ್ಲಿ ಆ ಹುಡುಗನು ಶಾಶ್ವತ ನಿದ್ದೆಯನ್ನು ಅನುಭವಿಸುತ್ತಿದ್ದನು. "ಅಯ್ಯೊ! ಹಿಂದು ಸಮಾಜವೇ, ನಿನ್ನ ಒಂದು ಹುಡುಗನ ಹೊಟ್ಟೆಗೆ ಕೊಡಲು ನಿನಗೆ ಏನೂ ಇದ್ದಿಲ್ಲವೆ? ಮಲಗಲಿಕ್ಕೆ ಒಂದು ಗೇಣು ಸ್ಥಳವಿದ್ದಿಲ್ಲವೇ? ಪುರಾಣಗಳಲ್ಲಿ ಪ್ರಸಿದ್ಧವಾದ ಹಿಂದು ಧರ್ಮವು ಇಷ್ಟು ನಿರ್ದಯವಾಯಿತೆ? ಎಲ್ಲೆಲ್ಲೂ ನಿರ್ದಯತೆ, ಜಗತ್ತೇ ನಿರ್ದಯ, ಆದ್ದರಿಂದಲೇ "ನಾನು ಭೂಮಿತಾಯಿಯ ಮಡಿಲಲ್ಲಿ ಮಲಗಿದ್ದೇನೆ" ಎಂದು ಆ ಹುಡುಗನು ಹೇಳುತ್ತಿರುವಂತೆ ನನಗೆ ಭಾಸವಾಯಿತು. ಚಿಲ್ಲರೆಂದು ಅಭಾವದಂತಹ ಕ್ಷುಲ್ಲಕ ಕಾರಣಗಳಿಂದ ಆ ನಿರಾಧಾರಿಗೆ ಸಹಾಯ ಮಾಡಲು ಉದಾಸೀನ ಮಾಡಿದ ನಮ್ಮಂತಹ ಜನರಿರುವವರೆಗೆ ಹಿಂದು ಸಮಾಜ ಹೀಗಿರುವುದೇ ಸರಿ; ಎಂದು ನಾವಿಬ್ಬರೂ ನಮ್ಮನ್ನು ವಿಧವಿಧವಾಗಿ ಶಪಿಸಿಕೊಂಡು ದುಃಖಪಟ್ಟೆವು. ಹಾಯ್; ಮಾಡುವುದೇನು? ಕಾರ್ಯ ಮಿಂಚಿಹೋಗಿತ್ತು!



## ಚಂದಾದಾರರಲ್ಲಿ ವಿನಂತಿ

—೦—

ಯಾವದೇ ಪತ್ರವ್ಯವಹಾರ ಮಾಡುವಾಗ್ಗೆ ನಿಮ್ಮ ಚಂದಾ ನಂಬರನ್ನು ಅಂದರೆ ನಾವು ನಿಮ್ಮ ವಿಳಾಸದ ಪ್ರಾರಂಭಕ್ಕೆ ಸೇರಿಸಿದ ನಂಬರನ್ನು ಬರೆದರೆ ಮಾತ್ರ ನಿಮ್ಮ ಪತ್ರಕ್ಕೆ ಲಕ್ಷಗೊಡಲಾಗುವದು. ಅವಧಿ ಮುಗಿಯುವ ಮುಂಚೆಯೇ ೧೫ ದಿನ ಪೂರ್ವದಲ್ಲಿ ವ್ಹಿ. ಪಿ. ಮಾಡಲಾಗುವದು. ವ್ಹಿ. ಪಿ. ಬೇಡಾದವರು ೧೫ ದಿನ ಮೊದಲೇ ನಮಗೆ ತಿಳಿಸಬೇಕು. ವ್ಹಿ. ಪಿ. ತಿರಸ್ಕರಿಸಿ ಹಿಂದುಗಡೆ M. O. ಮಾಡಿದರೆ ವ್ಹಿ. ಪಿ. ಖರ್ಚು ಮುರಿಯಲಾಗುವದು.

## ಕರ್ಮವೀರ ಚಂದಾ ವಿವರ

ಅಂಚೆ ವೆಚ್ಚ ಸಹಿತ ಚಂದಾ ಹಣ ಮುಂಗಡ

| | |
|---|---|
| ೧ ವರ್ಷಕ್ಕೆ | ೬—[illegible]—೦ |
| ೬ ತಿಂಗಳಿಗೆ | ೩—೪—೦ |
| ೩ ,, | [illegible]-೧೨—೦ |

ವ್ಹಿ. ಪಿ. ಯಿಂದ ತರಿಸಿಕೊಂಡಲ್ಲಿ ಪ್ರತಿಗೆ ೬ ಆಣೆ ಹೆಚ್ಚಿಗೆ ಬೀಳುವದು.

ವ್ಯವಸ್ಥಾಪಕ

